ಕಂ|| ಉತ್ತರೆ ಪೂರ್ವಾಭಾದ್ರೆಗೆ |
ಉತ್ತಮ(ರ) ಭಾದ್ರಪದಕ್ಕಂತೆ ಪೂರ್ವೆಗೆ ಮಘೆ(ಖೆ)ಗೆ ||
ಪ್ಪತ್ತು ಕಡೆಯಾಗಿಯುಂ ನೂ |
ಱುತ್ತಮ (೧೨೦) ಗುಣಕಾರ[1]ಮಕ್ಕುಮರ್ಹದ್ದಾಸಾ || ೧೯ ||

ಉತ್ತರಷಾಢೆಕ್ಕಂತ |
ಯ್ವತ್ತಯ್ದಧಿಕಮಾ(ಭಾ)ಗಿಸಲ್ಕಿನ್ನೂಱುಂ ||
ಮತ್ತವಱೊಳಯ್ದುಗುಂದಿಸು (೨೫೦) |
ವೃತ್ತಭುಜಾ ಪೂರ್ವಷಾಢೆಕಿವು ಗುಣಕಾರಂ(ಗಳ್) || ೨೦ ||

ರೇವತಿ ವಿಶಾಖೆ ರೋಹಿಣಿ |
ಗಾವರಿಸಿರೆ ನೆಱಪುಗಱುದು (೧೫೦) ನೂರಯ್ವತ್ತಂ ||
ಭಾವಿಪನುರಾಧೆಗಾರ್ದ್ರೆಗ |
ವಿಾವಿಧದಿಂ ಕೊಳ್ವುದಱುದು ನೂಱಿಪ್ಪತ್ತಂ (೧೨೦) || ೨೧ ||

ಮನುಚರಿತ ಮೂಲಕಱುವ (೬೦) |
ತ್ತನೆ ಕೊಳ್ವುದು ತಪ್ಪದಿಪ್ಪತ್ತೇೞಂ ಭಗಣ ||
ಕ್ಕನುನಯದಿಂ ಗುಣಕಾರಮು |
ನನುಪಮಮತಿ ಮಾಚಿಕಂಗೆ ಪೇೞ್ದಂ ಱಟ್ಟಂ || ೨೨ ||
(ಇಂತು ನಕ್ಷತ್ರ ಗುಣಕಾರಂ)

೭. ರಾಶಿ ಗುಣಕಾರಂ

ಕನ್ನೆ ತೊಲೆ ವಿಾನ ಮಿಥುನ |
ಕ್ಕುನ್ನತ ವೃಷಮೇಷ [2]ವೃಶ್ಚಿಕಕ್ಕಂ ನಯದಿಂ ||
ಮನ್ನಿಸೆ ನೂರಯ್ದಂ (೧೦೫) ಕೊಳು |
ಸನ್ನುತ ಧನುಕುಂಭಕಂತೆ ತೊಂಭತ್ತುವರಂ (೯೦) || ೨೩ ||

ಹರಿಗೊಂಬತ್ತುಂ (೯) ಕರ್ಕಿಗೆ |
ನಿರುತಂ ನೂಱಿರ್ಪತ್ತೊಂದು (೧೨೧) ಮಿದು ಗುಣಕಾರಂ ||
ಪರಿವಿಡಿದಪ್ಪದೆ ಕೊಳು ಪ |
*ನ್ನೆರಡುಂ ರಾಶಿಗಳ ಗುಣಮನೊಳ್ಪಿದ ಱಟ್ಟಾ || ೨೪ ||
(ಇಂತು ರಾಶಿ ಗುಣಕಾರಂ)

೮. ಗ್ರಹ ಗುಣಕಾರಂ

ಕನಕ ಬುಧರವಿಜರಱು[3]ವ (೬೦) |
ತ್ತನೆ ಕೊಳ್ವುದು ಸಸಿಗೆ ಕೊಳ್ವುದಱುವತ್ತಯ್ದಂ (೬೫) ||
ದನುಜಗುರುಗೆೞ್ಪತಯ್ದಂ (೭೫) |
ಮನುನಿಭ ಸುರಗುರುಗೆ ಕೊಳ್ವುದೆಂಭತ್ತಯ್ದಂ (೮೫) || ೨೫ ||

1 ಮಾಗಿಯುಂ ತಾನಕ್ಕುಂ. 2 ಷಕಕ್ಕೆ ವೃಶ್ಚಿಕಲಿಂಗಂ.
*ಮಕರ ಶಾಶಿ ಬಿಟ್ಟುಹೋಗಿದೆ.

ಕಂ|| ಸಲೆ ನೂಱವಮೂವತಯ್ದಂ (೧೩೫) |
ಜಲಜಸಖಂಗುಡುಪತಿಗೆ *ಕುಡುಗೆಬ್ಬಿತ್ತಂ (೭೦) ||
ಸುಲಲಿತ ವಿಭ್ರಮ ಗು(ಗ)ಣಿತಂ |
ಪೊಲಿಗಿಡದವನಱಿದು ನೀನೆ (ನೆಱೆ) ಕಲಿವುದು ಅಟ್ಟಾ || ೨೬ ||

(ಇಂತು ಗ್ರಹ ಗುಣಕಾರಂ)

೯. ಭಗಣರಾಶಿ ಗ್ರಹಂಗಳ ಗುಣಕಾರಂ

ಚಂ|| ಋತು ನಿಧಿ ಪನ್ನಗಾಬ್ಧಿ (೪೮೯೬) ಭ-(ರ)ಣಕ್ಕೆ ವಿಯತ್ತಳಬಾಣರುದ್ರ (೧೧೫೦) ಸ |
ನ್ನುತಮಿವು ರಾಶಿಗಳ್ಗೆ ನಭಮಂಬರಮುಂ ರಸಮುಂ (೬೦೦) ಗ್ರಹಕ್ಕೆ ಸ ||
ನ್ನುತ ಗುಣಕಾರ ರಾಶಿಗಳ ಲೆಕ್ಕಮಿವಂ ನೆಱೆ ಭಾವಿಸುತ್ತು ಮಾ |
ಪ್ರತಿಗಳ ಕುಂದು ಪೆರ್ಚನಱಿ ಮಾಚಿಗ ಅಟ್ಟ[1]ನ ಪೇಲ್ದ ಮಾಟ್ಕೆಯಿಂ || ೨೭ ||

(ಇಂತು ಭಗಣರಾಶಿಗ್ರಹಂಗಳ ಗುಣಕಾರಂ)

ವ|| ನಂದಾಚಾರ್ಯರ್ (ಮಾಡಿದರ್ಘಖಂಡಮಂ) ಮತದ ನಕ್ಷತ್ರರಾಶಿ ಗುಣಾಕಾರಂಗಳ್ ಪೇೞ್ವೆಂ—

೨೦ ೨೫ ೨೯ ೧೫ ೩೧ ೨೧(೪೦) ೨೭ ೧೫ ೨೦ ೩೧
ನರ ಮುರ ಧಾತ್ರಿ ಮಾಟ ಕುಲ ನಾಭಿ ಸುರಂ ಮುಕ ನಾರಿ ಪೂರಿ(ಲಿ)(ಯುಂ) |
೨೮ ೧೪ ೧೯ ೨೧ ೨೧ ೨೦ ೨೪ ೨೦ ೫೧ ೩೭
ದರಿ ಭಟ(ದಿ) ಧೂಪಿ ಕಾರ ಕರಿ ನಾರಿ ಭರಂ(ಣ) ನಿರ ಪಾಮ ಸೂಲಿ(ಯುಂ) ||
೨೧ ೨೪ ೩೯ ೩೮ ೪೦ ೨೩
ಪುರಿ ಭರಿ ದಂಗ ದಾಡಿ(ನಾ) ನಿಭ(ಮುಂ) ಗುರು †........ವಿವೆಂಬ ಸಂಖ್ಯೆಯಿಂ |
ಧರೆಗೆಸೆದಿರ್ಕುಮಶ್ವಿನಿ ಮೊದಲ್ ಕಡೆ ರೇವತಿಯಾಗೆ ರಿಕ್ಷಗಳ್ || ೨೮ ||

(ಇಂತು ನಕ್ಷತ್ರ ಗುಣಕಾರಂಗಳ್)

ಚಂ|| [2]ಖರ ಧರ ಜಾಯು ಖಗ ಜಗ ದಿಂ ನಿರು ಮಾಯು ಸೂರಿ ಯಿ |
ಪ್ಪರುಗಿ ಜಪಂ ಮುದಂ ಮನಿಂ [3]ಇವಜಾಂತರದಾದಿ (ರಾಶಿ)ರಿಕ್ಷಗಳ್ ||
ನಿರುಪಮನಾಟ್ಯ ಕಾಲ ಮಲ ದೂಷ್ಯ ಗುರು ನಾಭಿ [4]ನಾರಿಯೆಂದು ತಾಂ |
ಪರಿವಿಡಿಯಿಂದ(ದಿ)ನಾ(ದಿ)ಸಹಿತಂ ಗ್ರಹದಂಶಮುಮಾಗಮೋಕ್ತಿಯಿಂ || ೨೯ ||

(ಇಂತು ರಾಶಿಗ್ರಹ ಗುಣಕಾರಂ)

(ಇಂತು ನಂದಾಚಾರ್ಯಮತದ ನಕ್ಷತ್ರರಾಶಿಗ್ರಹ ಗುಣಕಾರಂಗಳ್)

ವ|| ಇನ್ನೊರ್ವರಾಚಾರ್ಯರ ಮತಮಂ ಪೇೞ್ವೆಂ—

ಕಂ|| ಶ್ರವಣಂ ಸ್ವಾತ್ಯಶ್ವಿನಿಗಂ |
[5]ನವತಿ (೯೦) ಕೃತಂ ಗುರುಗೆ ಹಸ್ತಕಂ ಸಮನಿಕುಮೋ ||
ವದೆ ಪೊಯ್ಗೆ ಯೆಪ್ಪತಯ್ದಂ (೭೫) |
ತವು ಫಣಿಗಂ ನೂಱತೊಂಭತಯ್ದಂ (೧೯೫) ಮಾಚಾ || ೩೦ ||

1 ನಿಷ್ಪದಿಂ. 2 ವೃತ್ತ ಖರ ೨೨ ದಳೆ ೨೮ ಜಯು ೧೮ ಖರ ೨೨ ಜಗ ೩೮ ದಿಗನೆ ಕೊಳುವುದು ಸರಿ. 3 ಮೇಷಾತದಾದಿ ರಿಕ್ಷೆ. 4 ನಾರಿನ ಪರಿವಿಡಿ. 5 ನಮತಿ ಗುರುಗೆ...ಪೋಯೆಪ್ಪತಯ್ದಂ.

*ಚಂದ್ರನು ಎರಡಾವೃತ್ತಿಯಿದೆ. †ಇಲ್ಲಿ ಎರಡು ನಕ್ಷತ್ರಗಳು (ಅಭಿಜಿತ್ತು ಸೇರಿ) ಬಿಟ್ಟುಹೋಗಿವೆ.

ಕಂ|| ಕೃತ್ತಿಗೆ ಗಭಿಜೆಗೆ ಜ್ಯೇಷ್ಠೆಗೆ |
ಚಿತ್ತೆಗೆ ಮೃಗಶಿರೆಗೆ ಶತಪಿಶಾಖೆಗೆ ಕೇಳ ||
ಯ್ವತ್ತು (೫೦) ಧನಿಷ್ಠೆಗೆ ಗುಣಿಯಿಪು |
ದೆತ್ತಂ ನೀಂ ನೂಱನೂವತಯ್ದಂ (೧೩೫) ಱಟ್ಟ || ೩೧ ||

ಉತ್ತರಷಾಢಕ್ಕಂತ |
ಯ್ವತ್ತಯ್ದಂ (೫೫) ವೊಂದುಗುಂದಿದಿನ್ನೂಱಂ (೧೯೯) ಕೊ ||
ಳ್ಳುತ್ತ ದಱಕೊಳಯ್ದು ಗುಂದಿಸು (೧೯೪–೧೯೫) |
ವೃತ್ತಭುಜಾ ಪೂರ್ವಷಾಢೆಕಿವು ಗುಣಕಾರಂ || ೩೨ ||

ಉತ್ತರೆ ಮಘೆ ಪೂರ್ವೆಗ ಮೆಸೆ |
ವುತ್ತರಭಾದ್ರಕ್ಕೆ ಪೂರ್ವಭಾದ್ರೆಗಮುಱ ಕೇ ||
ಳ್ವತ್ತು ಕಡೆಯಾಗಿ ಯಿನ್ನೂಱು |
[1]ಪತ್ತಂ ಮಘೆಸಹಿತ(ಮೆಂತು) ವೊಂಭೈನೂಱಂ || ೩೩ ||

ಮಾರುತ ವಿಶಾಖೆ ರೋಹಿಣಿ |
ಗಾಷರಿಸಿದ ನೆಣಿಸಿಕೊಳ್ಗೆ ನೂಱಯ್ವತ್ತಂ (೧೫೦) ||
ಭಾವಿಸದ(ಸುಗ)ಸುರಾಷೆಗೆ ನೀ |
ನೀವಿಧದಿಂ ದೆಣಿಸಿಕೊಳ್ಗೆ ನೂಱಯ್ವತ್ತಂ || ೩೪ ||

ಮನುಚರಿತ ಮೂಲಕಱುವ (೬೦) |
ತ್ತನೆ ಕೊಳ್ವುದು ತಪ್ಪದಿಪ್ಪತ್ತೇೞುಂ ದಿವಸ ||
ಕ್ಕನುಪಮಂದಂ ಗುಣಕಾರಂ |
ಅನುನಯದಿಂ ತಪ್ಪದೆಂದು ಭಾವಿಸು ಮಾಚಾ || ೩೫ ||

(ಇಂತು ಮತ್ತೊರ್ವಾಚಾರ್ಯಮತದ ನಕ್ಷತ್ರಗುಣಕಾರಂ)

೧೦. ರಾಶಿ ಗುಣಕಾರಂಗಳ್

ವ|| ಇನ್ನು [2]ರಾಶಿಗುಣಕಾರಮಂ ಪೇೞ್ವೆಂ—

ಕಂ|| [3]ಮೃಗಪತಿಗೊಂಬತ್ತುಂ (೯) ಕ |
ನ್ನೆಗೆ ಪತ್ತು (೧೦) ಚಾಪಕುಂಭಕಂ ತೊಂಬತ್ತುಂ (೯೦) ||
ಬಗೆಗಿಪ್ಪತೊಂದು ಕಡೆಯೊಳ್ |
ಸೊಗಯಿಸಿ[4]ಕೊಳ್ (೧೨೧) ನೂಱನೆಂದನರ್ಹದ್ದಾಸಂ || ೩೬ ||

ವೃಷಮೇಷ ಮಿಥುನಕರ್ಕಟ |
ಝುಷಮಕರಂ ತುಲೆಗ ಮಱುದುನೂರಯ್ವತ್ತಂ (೧೫೦) ||
ಝುಷಮೇಷಾಂತಂ ರಾಶಿಗೆ |
ವಿಶೇಷದಿಂ ಧ್ರುವಮುಮಕ್ಕುಮಿಾಕ್ರಮದಿಂದಂ || ೩೭ ||

(ಇಂತು ರಾಶಿಗುಣಕಾರಂಗಳ್)

---

1 ಪತ್ತುಂ. 2 ರಾಶಿಯ ಗುಣಾಕಾರಕ್ಕೆ. 3 ಮೃಗಪತ್ತುಂ (೧೦). 4 ಕೊಳು ನೂಱಂ.

### ೧೧. ಗ್ರಹ ಗುಣಕಾರಂ

ಕಂ|| ಸಲೆ ನೂಱುಮೂವತಯ್ದುಂ (೧೩೫) |
ಬಿಸಜಸಖಂಗಿಂದುಗಂತೆ ಕೊಳ್ಳ(ಂಡ)ಱುವತ್ತುಂ (೬೦) ||
ಕುಲಿಶಿಗುರು ಗಯ್ವತಯ್ದುಂ (೫೫) |
ದಲಘು ಭುಜಾ ದೈತ್ಯಮಂತ್ರಿಗೆಪ್ಪತ್ತಯ್ದುಂ (೭೫) || ೩೮ ||

ಮಂದಂಗಱುವತ್ತಯ್ದರನಿ (೬೫) |
ಗೆಂದುಂ ತೊಂಭತ್ತು ನೆಗಲ್ದ ಗುಣಕಾರಂಗಳ್ ||
ಎಂದವಧಾರಿಪುದಿ(ದ)ರ್ಘಂ |
ಕುಂದದದೆಂದಂದು ವಿನುತಗುಣಕಾರಂಗಳ್ || ೩೯ ||*

(ಇಂತು ಸರ್ವಮತ ನಕ್ಷತ್ರರಾಶಿಗ್ರಹ ಗುಣಕಾರಂಗಳ್)

### ೧೨. ಅರ್ಘಖಂಡಂ

ವ|| ಇನ್ನು ಅರ್ಘಖಂಡ ಪ್ರಮಾಣಮಂ ಪೇೞ್ವೆಂ—

ಕಂ|| ಎಳ್ಳವರೆ ತೊಗರಿ ನೆಲ್ ಪುರು |
ವಳ್ಳಿ ಪೆಸರ್ಗಡಲೆಯುದ್ದುರ್ ಗೋದುವೆ ಜೋಳಂ ||
ತೆಲ್ಲ ನಳವಡಿಗೆ ರಸಮಿವು(ವ) |
ನುಳ್ಳರ್ಘಮನಱಿದು ನೆಱೆಯೆ ಭಾವಿಸು ಮಾಚಾ || ೪೦ ||

ಕಿಱುಸುಗ್ಗಿಯಿಂದಿನರ್ಘಮ |
ನಱಿತ[ತಿ] ರೇಕದಿಂದ ವೊಂದುವರುಷಂ ಬರೆಗಂ ||
ಮ(ತು)ಱೆಯದೆ ಬ(ಬೆ)ಱ(ರ)ದಿರ್ದಂತವ |
ನಱಿವುದು ನಕ್ಷತ್ರರಾಶಿಯಿಂ ಗ್ರಹಗಣದಿಂ || ೪೧ ||

ಉಡುರಾಶಿಯ ಗುಣಕಾರಮ |
ನೊಡದಿದಾರ್ ಗ್ರಹಮನಱಿದು ಯೆರಡುಂ ಪ್ರತಿಮಾ ||
ಡಡಿಯಣ ರಾಶಿಯನ್ನೀ(ವು) ಉದು(ಡು) |
ಸೆಡೆಯದೆ ವೊಂದು ಚಿತ್ರದರ್ಘಂ ಧ್ರುವದಿಂ || ೪೨ ||

ನೀಡಿರದೆ ಪಡೆವ ಲಬ್ದಂ(ತಿ) |
ಗೂಡುಗೆ ತದ್ಗ್ರಹಮನದಱೊಳೂರ್ಧ್ವಪ್ರತಿಯೊಳ್ ||
ನೋಡಿ ತೆಗೆ ಕಾಲ [1]ಮುಱಿದವ |
ಗಾಢಗುಣಾ ನಾಲ್ಕಱಿಂದೆ ತೆಗೆದೊಡೆ ಬೞಿಯಂ || ೪೩ ||

ಮತ್ತವ ನಾಲ್ಕಱಿನಿಱಿದುವ |
ನೆತ್ತುಗೆ ಮಾನಂಗಳಕ್ಕು [2]ವಿಾಕ್ರಮದಿಂದಂ ||
ಮತ್ತಿನ ಧಾನ್ಯಂಗಳುಮಂ |
ವೃತ್ತಭುಜಾಂತರ್ಘಮೆಂದು ಮಾಚಿಗೆ [3]ಪೇೞ್ದಂ || ೪೪ ||

1 ಮನೀವಗಾಢಂ. ಮಿಶ್ರ ಕ್ರ. 3 ನೆಗಟ್ಟಿ.

*ಇಲ್ಲಿ ಬುಧ ಚಂದ್ರ–ಈ ಗ್ರಹಗಳ ಗುಣಕಾರವನ್ನು ಹೇಳುವ ಕಂದವು ಗಳಿತವಾಗಿದೆ.

ಕಂ|| ಗ್ರಹದುದಯಮಸ್ತಮಾನಂ |
ಗ್ರಹಯುದ್ಧಂ ಪೌರ್ಣಮಾಸೆಯುಮವಾಸೆ[1]ಗಳೊಳ್ ||
ಗ್ರಹವಕ್ರೋತ್ಪಾತಂಗಳ್ |
ಗ್ರಹದಿಂದರ್ಘಾಧಿಕಾರಮಂ ನೋಟ್ಕೆ ಬುಧರ್ || ೪೫ ||

ಪಾಪಾಂತರ್ದಶದೋಷಂ |
ಪಾಪಗ್ರಹನಿಚಯಮುಟಿದ ನಿಯಮಿಪ ಪದದೊಳ್ ||
ವ್ಯಾಪಿಸೆ(ಪ) ಸಂಕ್ರಮಮರ್ಘಮ |
[2]ನೀ ಪರಿಚಿತಮಾಗಿ(ಗ) ನೋಡಿ(ಡ) ಅಟ್ಟನ ಮತದಿಂ || ೪೬ ||

ಶುಭನಿಲಯಂ ಶುಭದಿವಸಂ |
ಶುಭಗ್ರಹಂ ಮಿತ್ರಯುಕ್ತಮುಂ ಸಂಕ್ರಮಣಂ ||
ಪ್ರಭವಿಸಿದೊಡೆ ಕಂಡರ್ಘಂ |
ಶುಭದಮುಮಾಸ್ಥಿತಿಯೊಳಕ್ಕುಮರ್ಹದ್ದಾಸಾ || ೪೭ ||

ತನ್ನ ಗೃಹಮುಚ್ಚನಿಲಯಂ |
ತನ್ನಂಶಂ ಕೂಡಿದರ್ಘಮಂ ದ್ವಿಗುಣಿಸಿಕೊಳ್(ಳು) ||
ಬಿನ್ನಣಮೇನತ್ಯುಚ್ಚದೊ |
ಳುನ್ನತಗುಣ ಪಡೆದ ಲಬ್ಧಮಂ ತ್ರಿಗುಣಿಸಿಕೊಳ್ || ೪೮ ||

ನಿರತಿಶಯಮೆನಿಸಿದರ್ಘಮ |
ನೆರೆ(ನಿರ)ದೆಡೆಯೊಳ್ ಪ್ರತಿಯನಿಟ್ಟೊಡಂತಾ ಪ್ರತಿಯಂ ||
ಪರಿವಿಡಿದಪ್ಪದೆ ಶುಕ್ರನ |
ಚರಿಯಿಪ ಸನ್ಮಾ[3]ರ್ಗ ಮುಕ್ತೆಯಂ ಚರಿಯಿಸುಗುಂ || ೪೯ ||

ನಾಲ್ಕೆಂಬ ವೀಥಿಯೆಡೆಯೊಳ್ |
ನಾಲ್ಕುಱ ಮೂಱಱೊಳೆ ಮೂಱಱಿಂದಂ ಕೊಳ್ ನೀಂ ||
ಸಿಲ್ಕಿಲ್ಲದೆ ಕೂಡಯ್ದಂ |
ಬಲ್ಕಣಿ ನೀನಯ್ದುಗೆಯ್ದು ಕಳೆ ಪಡೆದನಿತಂ || ೫೦ ||

ನೆಗಲ್ದಮಘಾ(ಮಾ) ಪಂಚಕದೊಳ್ |
ಭೃಗುತನಯಂ ಮೂಡ ಪಟ್ಟು ಪಡವಲ್ ಮೂಡಲ್ ||
[4]ಬಗೆಗಿಡದೞಿಕೊಳ್ ನೀಂ ಕೊಂ |
ಡೊಗೆದೊಡೆ ಲಬ್ಧಿ ಮೇಗೆ ಕೂಡಿದಂದದುವರ್ಘಂ || ೫೧ ||

ಸ್ವಾತಿ ತ್ರಿಕದೊಳ್ ಭೃಗುಜಂ |
ಮಾತೇಂ ಮೂಡಸ್ತಮಿಪ್ಪೊಡಂ ಪಡುವಲತಿ ||
ಪ್ರೀತಿಯು(ತಂ) ಮೂಡುವೊ(ಡಲೊ)ಡಂ |
ಖ್ಯಾತಿ ತ್ರಿಕದೆತ್ತಿ ಪ(ನ)ಡೆದುವಂ ತತ್ಪ್ರತಿಯೊಳ್ || ೫೨ ||

1 ಯೊಳಂ. 2 ನೀ ಪೆಚ್ಚದೆ ನೋಡಿ ಅಟ್ಟಗಾಂಕನ. 3 ರ್ಗಮಂಜರಿ. 4 ಬಗೆದೊಡದ ಕೊಳ್ ನೀಂ ಕೊಂಡೊಡ ಲಬ್ಧಿಮೇಗೆ, ಲಬ್ದಂ ಕೂ.

ಕಂ|| ನುತಜ್ಯೇಷ್ಠಾ ಪಂಚಕದೊಳ್ |
ಸಿತನಪರದೊಳಸ್ತಮಪ್ಪೊಡಂ ಮೂಡಲ್ ಸ ||
ನ್ನುತನುದಯಮಪ್ಪೊಡಂ ಯ |
ತ್ನತೆಯಿಂದಂ ಕೊಂಡು ಕೂಡೆ(ಡು) ನೀಂ ತತ್ಪ್ರತಿಯೊಳ್ || ೫೩ ||

ಎರಡುಂಗ್ರಹಮೊಂದೆಡೆಯೊಳ್ |
ನೆರೆದಿರ್ದೊಡೆ ಮಱೆವುದರ್ಘಮಂ ಕೂಡೆ ಸಮಂ ||
ತೆರಡಱೊಳಗಿರ್ದ ಲೆಕ್ಕವ |
ಧರೆಯೊಳೆ ನಿಂದರ್ಘಮಕ್ಕುಮರ್ಹದ್ದಾಸಾ || ೫೪ ||

(ಇಂತು ಅರ್ಘಖಂಡಂ)

೧೩. ಸಂಕ್ರಾನ್ತಿ ಫಲಂ

ವ|| ಇನ್ನು ಸಂಕ್ರಾನ್ತಿ ಫಲಮಂ ಪೇೞ್ವೆಂ*—

ಕಂ|| ಬಾಲವಬವ ವಿಷ್ಟಿಯೊಳಂ |
ಮೇಲೆನಿಸ್ಪುವ ವಣಿಜೆಯೊಳಗೆ[1]ಕುಳಿಕಂ ಧ್ರುವ ||
ಕಾಲವದಱೊಳೆ ಕಂ(ಬಂ)ಡಿ(ದಿ)ರ್ಕುಂ |
ಲೀಲೆಯ ತೈತ(ತು)ಲೆಯುಗರಿಜೆಯೊಳ್ ಪ(ಪಿ)ಟ್ಟಕರ್ಂ || ೫೫ ||

ನಿರುಪಮ ವಿಶಾಖೆ ಮೂಱು |
ತ್ತರೆ ರೋಹಿಣಿಯದಿತಿಯೆಂಬಿವಾಱುಂ ವರ ಋ ||
ಕ್ಷಗೆ ನೆಗಳ್ದ ನಾಲ್ವತ್ತಯ್ದಾ |
ವರಿಸೆ (೪೫) ಮುಹೂರ್ತಮೆನೆ ತಪ್ಪದೊಳ್ಪಿನ ಅಟ್ಟಾ || ೫೬ ||

ಅನುರಾಧೆ ಚಿತ್ತೆಮಘೆ ಯ |
ಶ್ವಿನಿಹಸ್ತಂ ಶ್ರವಣಪುಷ್ಯಮುಂ ರೇವತಿ ಸಂ ||
ದನಲಂ ಧನಿಷ್ಠೆ ಮೂಲಮಿ |
ವಿನಿತುಂ ತ್ರಿಂಶನ್ಮುಹೂರ್ತಮಂ (೩೦) ನೆಱೆಯಾಳ್ಗುಂ || ೫೭ ||

ಸಂದಿಂದ್ರೆ ಜ್ಯೇಷ್ಠೆ ಭರಣಿಯು |
ನಿಂದಿತಮಾಶ್ಲೇಷೆ ಶತಭಿಷಾ ಸ್ವಾತಿಯುಮೊಂ ||
ದೊಂಪು ಪದಿನಯ್ದು (೧೫) ಮುಹುರ್ತ |
ಮೆಂದಱಿವುದು ನೆಱೆಯೆ ಪೇಳ್ದನೊಳ್ಪಿನ ಅಟ್ಟಂ || ೫೮ ||

ಕುಂದುವ ಪೆರ್ಚುವ ಸಮನೆನಿ |
ಪಂವದುವಾ(ಕಲ)ಗ್ದಷ್ಟಿಕರದಿನದೊಳ್? ವಿದ್ವ ||
ನ್ಮಂದಿರದೊಳ್ ನಭದಲ್ಲಿರ |
ದೊಂದಿದ ಸಂಕ್ರಮಣಮರ್ಘಮಾಸ್ಥಿತಿಯಕ್ಕುಂ || ೫೯ ||

1 ಮಲ್ಲಿಕ್ಕುಂ.

*ಇಲ್ಲಿಯೂ ನಕ್ಷತ್ರರಾಶಿ ಗ್ರಹ ಗುಣಕಾರ ಹೇಳಿದೆ – ಇದು ಮತ್ತೊಬ್ಬಾಚಾರ್ಯರ ಮತವಿರಬಹುದು.

ಕಂ|| ಕೃತ್ತಿಗೆ ಮೃಗಶಿರೆಯಶ್ವಿನಿ |
ಚಿತ್ತೆ ಕೃತಾಂತಕ ಧನಿಷ್ಠೆ ಶತಭಿಷೆ ಮಘೆಯೆಂ ||
ಬುತ್ತಮರಿಕ್ಷೆಗೆ ಗುಣಿಯಿಪು |
ದೆತ್ತಂ ನೀಂ ನೂಱಮೂವತಯ್ದಂ (೧೩೫) ಅಟ್ಟಾ || ೬೦ ||

ಉತ್ತರೆಗೆಸೆವಿನ್ನೂರ |
ಯ್ವತ್ತೇೞಾ (೨೫೭) ಪೂರ್ವಗದಱೊಳೇಕಂಗಳೆಗ ||
ಯ್ವತ್ತಗಡ (೨೫೬) ಹಸ್ತಜ್ಯೇಷ್ಠೆಗೆ |
ವೃತ್ತಭುಜಾ ಪುಷ್ಯಕೆಪ್ಪತಯ್ದು (೭೫) ಗುಣಂಗಳ್ || ೬೧ ||

ಅನುರಾಧೆಗೆ ನೂಱಿಪ್ಪ |
ತ್ತನೆ (೧೨೦) ಕೊಳ್ವುದು ನೆಟ್ಟನೆರಡು ಭಾದ್ರಪದಕ್ಕಂ ||
ವನಜಜವಿಶಾಖೆಗಂ ಮು |
ತ್ತನುನಯ ನೂರಯ್ದ (೧೦೫) ನಱಿದುಕೊಳ್ ಗುಣಕಾರಂಗಳ್ || ೬೨ ||

ಪಿರಿಯುತ್ತರೆಗಯ್ನೂರ (೫೦೫) |
ಯ್ದೆರಡುತ್ತರೆಯಾ(ಮಾ)ಗಿ ಯಾದ್ರ್ರೆಗಂ ನೂಱಕ್ಕಂ ||
[1]ವರಗುಣ ಶ್ರವಣಸ್ವಾತಿಗೆ |
ದೊರೆವೆತ್ತಱುವತ್ತು (೬೦) ನೆಗಟ್ದ ಗುಣಕಾರಂಗಳ್— || ೬೩ ||

ರೇವತಿಗಕ್ಕುಂ ನೂರ (೧೦೫) |
ಯ್ದಾವರಿಸಿದ ದಿತಿತೋಯರಿಕ್ಷೆಗವಿನ್ನೂ ||
ರಾವಗೆ (೨೦೦) ಫಣಿಗಂ ಕೊಳ್ವುದು |
ಭಾವಿಸಿ ನೀಂ ನೂಱನಾಲ್ವತಯ್ದಂ (೧೪೫) ಅಟ್ಟಾ || ೬೪ ||

(ಇವು ನಕ್ಷತ್ರ ಗುಣಕಾರಂಗಳ್)

೧೪. ರಾಶಿಗುಣಕಾರಂಗಳ್

ವ|| ಇನ್ನು ರಾಶಿ ಗುಣಕಾರಂಗಳಂ ಪೇೞ್ವೆಂ—

ಕಂ|| ಇನ್ನು [2]ತೊಲೆ ಮಕರ ಮೀನಕೆ |
ಸನ್ನುತ ಮೇಷಾದಿ ನಾಲ್ಕು ರಾಶಿಗೆ ಗುಣಿಸಲ್ ||
ಬಿನ್ನಣದಿನೆಂಟುಗುಂದಿಸು |
ಮನ್ನಿಸಿಕೊಳ್ ನೂಱನಾಲ್ವತಂ (೧೪೦) ಬುಧಮಿತ್ರಾ || ೬೫ ||

ಧನುಸಿಂಹಂಗಳ್ಗಿಪ್ಪ |
ತ್ತನೆ (೭೦) ಕೊಳ್ವುದು ಕುಂಭಕಂತೆ ವೃಶ್ಚಿಕಕಂ ನೀಂ ||
ಮನವೊಸೆದುಂ ನೂಱಿಪ್ಪತ (೧೨೦) |
ನನುನಯಗುಣಕಾರಮಾಗಿ ಮಾಳ್ಪುದು ಅಟ್ಟಾ || ೬೬ ||*

(ಇಂತು ರಾಶಿಗುಣಕಾರಂಗಳ್)

1 ವರುಣಗುಣ. 2 ತೊಲೆ ಮಕರಂ ಮೀನಕ್ಕಂ ಸನ್ನುತ.

*ಇಲ್ಲಿ ಉಳಿದ ಐದು ಗ್ರಹಗಳ ಗುಣಕಾರ ಹೇಳುವ ಕಂದವಿರಬೇಕು.

೧೫. ಗ್ರಹಗುಣಕಾರಂಗಳ್

*ಕಂ|| ಸಲೆ ನೂಱಮೂವತಯ್ದುಂ (೧೩೫) |
ಜಲರುಹಮಿತ್ರಂಗೆ ಸಸಿಗಮಿನ್ನೂರೇೞಿಂ (೨೦೭) ||
ಕುಲಿಶಿಗುರುಗಿರ್ಪತಯ್ದುಂ (೨೫) |
ಪಲವುತತೆಱದಾಗ್ರಹಕ್ಕೆ ಕೊಳ್ಗಱು(೬೦)ವತ್ತುಂ || ೬೭ ||

(ಇಂತು ಗ್ರಹ ಗುಣಕಾರಂಗಳ್—ಅರ್ಘಕಾಂಡಂ)

೧೬. ಕೂರ್ಮಚಕ್ರಂ

ವ|| ಇನ್ನು ಕೂರ್ಮಚಕ್ರಮಂ ಪೇೞ್ವೆಂ—

ಕಂ|| ಈ ಗುಣಕಾರಂ ಕೂರ್ಮವಿ |
ಭಾಗಕ್ಕೆಸೆದಿರ್ಕುಮಲ್ಲಿ ಭಾವಿಸಿ ಪೇೞ್ದಂ ||
ದಾಗಮಕೋವಿದ ನೆನಿ(ಕುಂ) ಸುಗು |
ಮಾಗಾರ್ಗ್ಯವರಾಹಮಿಹಿರರಿಂದೀ ಧರೆಯೊಳ್[1] || ೬೮ ||

ಜಾಱೇಂ ಕೃತ್ತಿಗೆಯಾದಿಯು |
ಮೂಱುಂ ನಕ್ಷತ್ರಮೆಸೆವ ಕೂರ್ಮನ ಬೆನ್ನೊಳ್ ||
ಕೀಱು ನೆಲಸಿರ್ಕುಮವಱೊಳ್ |
ತೋಱುವ ಶನಿ[2]ಯಲೆವ ನಾಡ ಪೆಸರಂ ಪೇೞ್ವೆಂ || ೬೯ ||

†ಮ|| ಕುರುಶಾ ಕೈಕೆಯ ಪಾರಿಯಾತ್ರ ಮಿಥಿಳಾ ಪಾಂಚಾಳ ಗಂಗಾತಟಾಂ |
ತರ ಕೌಶಾಂಬಿ ಸಕುಂಭಿ ನಾಗಪುರದಿಂದೊಂದಿರ್ದಹಿ[3]ಚ್ಛತ್ರದಿಂ ||
ನಿರುತಂ ಪಾಟಲಿಪುತ್ರದಿಂದಮೆಸೆದಿರ್ದಾ ಮತ್ಸ್ಯದೇಶಕ್ಕೆ ತ |
ಸ್ಕರರೋಗಾದಿ ಭಯಂಗಳಂ ಜನಿಯಿಕುಂ ಪಂಕೇಜ[4]ಮಿತ್ರಾತ್ಮಜಂ (ಜಾ) || ೭೦ ||

ಕಂ|| ನೆಗಱ್ದಿರ್ದಾದ್ರಾದಿತ್ರಿಕ |
ಭಗಣಂಗಳ್ ನೆಱೆಯೆ ಕೂರ್ಮ[5]ಣೇನ್ಯ(ಣಾಸ್ಯ)ದೊಳಂ ||
ಬಗೆದು ತಿಳಿಯು(ವ)ಱಿಯೆ [6]ಭಾವಿಸು |
ನೆಗಱ್ದಿರ್ಪುದು ಪೂರ್ವದೇಶದೊಳ್ ಭಯಮಕ್ಕುಂ || ೭೧ ||

ಸ್ರ|| ಸ್ತ್ರೀರಾಜ್ಯಂ ಶೂರ್ಪವಂಗಂ ಮಗಧಮಹಿತಳಂ [7]ಪಾಂಡ್ಯ ಸೌರಾಷ್ಟ್ರ ಮುಳ್ಳಂ |
ಪಾರಿಷ್ಕಂ [8]ಪಾ(ಸಾ)ರಿಣಾರ್ಯಂ ಖಚರಸಹಿತ ಮಿನ್ನೊಂದು ಮಾವಲ್ಕಲಾಖ್ಯಾ ||
ಭೀರಂ ಚಂದ್ರಾಂಗದೇಶಂ ಜಲದೆ ಸುರಸರಿ[9]ತ್ಸಾರ ಕೂಟಾಂತರ ಪ್ರಾ |
ಸಾರಂ ನೀರೇಜ ಮಿತ್ರಾತ್ಮಜನ ದೆಸೆಯೊಳಂ ಕ್ಷುದ್ಭಯಂ ತಿಣ್ಣಮಕ್ಕುಂ || ೭೨ ||

---

1 ಅರ್ಘಕಾಂಡಂ ಸಮಾಪ್ತಂ, ಕೂರ್ಮಚಕ್ರಂ...... 2 ಯನಲ ನಾಡ. 3 ಕ್ಷೇತ್ರದಿಂ. 4 ಮಿತ್ರಾಂಬುಜಾ. 5 ಮಣಿಂ ನ್ಯಾಂದಾಳೋತೊಂ. 6 ಭಾನು. 7 ಪಾಂಡ್ಯದೇಶಂ ಸೌ. 8 ಪರಿಣಾರ್ಯಂ. 9 ತ್ಸಾತಿಶ ಕೂಟಾಂತರ ಸ್ಥಾಂ.

*ಇಲ್ಲಿ ಮೂರು ಗ್ರಹಗಳ ಗುಣಕಾರ ಮಾತ್ರವಿವೆ, ಉಳಿದುದು ಗ್ರಹಗಳದು ಕೈಬಿಟ್ಟುಹೋಗಿದೆ.

†ದೇಶವಾಚಕ ಶಬ್ದಗಳಲ್ಲಿ ಹಲವು ಅಶುದ್ಧಪಾಠಗಳಿವೆ.

ಕಂ|| ಸಂದಾಶ್ಲೇಷಾತ್ರಿತಯಮು |
ಮೆಂದುಂ ಕಚ್ಛಪನ ಬಲದ ಕೆಯ್ಯೊಳ್ ನಿಲ್ಕುಂ ||
ಮಂದನವಱೊಳಗೆ ನಿಲೆ ಪೊ |
ಲ್ಲೆಂದುಂ ಭಯಮುಕ್ಕುಮೆಂದ ದಹನನ ದೆಸೆಯೊಳ್ || ೭೩ ||

ಚಂ|| ಅನುಪಮ ಕಾನ್ತಿ[1]ವೆನ್ನಿಮದಿ........ ಕಾಶ್ಮೀರ [2]ಪಾರ್ಸ್ವಂತ ಸಂ |
ಜನಮು(ರು)ತ ಪೌಗುಳುತ್ತಿ ಪುರವೇಣಿ ನಿಜಾಂತರಮೆಂಬ ದೇಶಮುಂ ||
ಶನಿಭುಜಗಾದಿ ಮೂಱು ಭಗಣಂಗಳೊಳಿರ್ದೊಡೆ ರಾಜಬಾಧೆಯಿಂ |
*ದಱಿಗು ಮಮೋಘಮೆಂಬುದಿದು ಗಾರ್ಗ್ಯವರಾಹ ಮುನೀಂದ್ರ ಭಾಷಿತಂ || ೭೪ ||

ಕಂ|| ಉತ್ತರೆ ಹಸ್ತಂ ಚಿತ್ತೆಗ |
ಳಿತ್ತಂ ಕಚ್ಛಪನ ಬಲದ ಮಗ್ಗುಲೊಳಿರ್ಕುಂ ||
ಮತ್ತವಱೊಳ್ ಶನಿ ನಿಲೆ ಯಾ |
ಪತ್ತಂ ದಕ್ಷಿಣಮಹೀತಳಕ್ಕಂ ಮಾೞ್ಕುಂ || ೭೫ ||

ಚಂ|| ಎಸೆಕದವಂತಿ ಕಾಂಚಿ ಸಿಬಿರಂ ವಸವಾಸಿ ವಿದರ್ಭ ಸಿಂಹಣಂ |
ಮಸಗ(ವ) ವತ್ಸ ಭೀಮ(ರ)ಜನ ಸನ್ಮದಯಾಪುರಿಯೆಂಬ ದೇಶದಿಂ ||
ದೆಸೆದಿರೆ ದಕ್ಷಿಣಾಂಬುಧಿವರಂ ದಿನಪಾತ್ಮಜನುಗ್ರಕೋಪದಿಂ |
ಪಸವ ಭಯಂಗಳಂ ದಹನಬಾಧೆಯನದ್ಭುತಮಾಗೆ ಮಾಡುಗುಂ || ೭೬ ||

ಕಂ|| ಕೂರ್ಮನ ಬಲಗಾಲಂ ಸಲೆ |
ನೆರ್ಮ್ಮಿರ್ಕ್ಕುಂ ಸ್ವಾತಿಯಾದಿಯಾಗಿ ಮೂಱುಂ ಭಗಣಂ ||
ಪೆರ್ಮಾರ್ತಿನ ನೈಋತಿಯೊಳ್ |
ನಿರ್ಮಿಸುಗುಂ ನಿರುತಮೆಸೆವ ದೋಷಾವಳಿಯಂ || ೭೭ ||

ಉ|| ಕೊಂಕಣ ವೈಜಯಂತಿ ಚರುವಚ್ಛಸ ನಾಸಿತ ಗುಹ್ಯಮೂಲಮಂ |
ಬಿಂಕದ ಕೂರ್ಮನಿರ್ಜರ ಮಹೀತಳ ವಿಶ್ರುತ ನರ್ಮದಾಖ್ಯಮ ||
ತ್ತಂಕದ ರಾಜಬಾಧೆಯ ಘನಾಗಮಮಾಪರ ವಿಡ್ವ(ಡ್ಡ)ರಂಗಳಿಂ |
ದಂಕಮಮಾಗುರುಂ ನಿರುತಿಯತ್ತಣ ದೇಶದಿನಾತ್ಮಜಾತನಿಂ || ೭೮ ||

ಕಂ|| ಸಂದಿರ್ದ ಕೂರ್ಮಪು(ಪ್ಪ)ಚ್ಛದೊ |
ಳೊಂದಿರ್ಕುಂ ಜ್ಯೇಷ್ಠೆ ಮೂಲ ಪೂರ್ವಾಷಾಢಂ ||
ಮಂದನವಱೊಳಗೆ ಚರಿಯಿಪೊ |
ಡೆಂದುಂ ತತ್ಪಶ್ಚಿಮಾಶೆಗತ್ಯುಗ್ರಕರಂ || ೭೯ ||

ಉ|| ಚೇರ ಸುರಾಷ್ಟ್ರ ರಾಮಕರ ಯಾಮುಷ(ನ) ನಂದ[3]ಸುಪುಂಮಿ ಮತ್ಸ್ಯಪಿ |
ಚೀರಸಿನಿಂದಯಚ್ಛಯಮುನಾತಟ ವಚ್ಛ(ತ್ಸ)ಳಮೆಂಬ ದೇಶಮಂ ||
ಧಾರಿಣಿ ಕೀತ್ಕ(ಕ)ಟಾಂತರ(ದ)ಲರ್ಕಸುತಂ ನಿಲೆ ಶಸ್ತ್ರಬಾಧೆಯಿಂ |
ಮಾರಿಯಿನೊಂದುಮಿಲ್ಲದಱಿಗುಂ [4]ವರಪಿಂಗಳಗಾರ್ಗ್ಯಭಾಷಿತಂ || ೮೦ ||

1 ವೆನ್ನಿದದು. 2 ಪಾರಿಯಾತ್ರಸನ್ನುತಪಾಗ. 3 ಸುಪೂ ಇಮಚ್ಛಪಿ ಚೀರಸಿಂದಚ್ಛಯಮುನಾ. 4 ಜಱುಚೇಂಗಳ ಗಾರ್ಗ್ಯ. * ಪ್ರಾಸದೋಷವಿದೆ.

ಕಂ|| ಉತ್ತರಷಾಢಾಶ್ರವಣಂ |
ಮತ್ತಂ ಸೊಗಯಿಪ ಧನಿಷ್ಠೆ ಯೆಡಗಾಲೆಡೆಯೊಳ್ ||
ಮತ್ತಮವಱೊಳಗೆ ಶನಿ ನಿಲೆ |
ವೃತ್ತಭುಜಾ ಪವನದಿಕ್ತಟಾಂತರಮಕ್ಕುಂ || ೬೧ ||

ಶತಭಿ[1]ಷಗಾದಿಯ ಭಗಣ |
ತ್ರಿತಯಂ ಕಚ್ಛಪನ ವಾಮಪಾರ್ಶ್ವದೊಳಿರ್ಕುಂ ||
ಸತತಮವಱೊಳಗೆ ಶನಿ ನಿಲ |
ಉತುಪಾತಂ ಬಡಗನೆಲಕೆ ಪಲತೆಱನಕ್ಕುಂ || ೬೨ ||

ರೇವತಿಯಶ್ವಿನಿ ಭರಣಿಯು |
ಮಾವಗ(ಗೆ)ಮಕರಾಗ್ರದಲ್ಲಿ ನೆಲಸುಗುಮವಱೊಳ್ ||
ಭಾವಿಸು(ಸಿ) ಮಂದಂ ನಿಲೆ ಪೊ |
ಲ್ಲಾವಗ ವಿಾಶಾನ್ಯದತ್ತಣುರ್ವರೆಗೆಲ್ಲಂ || ೬೩ ||

(ಇಂತು ಕೃತ್ತಿಗೆಯಾದಿಯಾಗಿ ಮೂಱು ಮೂಱು ನಕ್ಷತ್ರಂಗಳಲ್ಲಿ (ಕೂರ್ಮ ನಂಗಂಗಳಲ್ಲಿ) ಶನಿ ಚರಿಯಿಸುವ ಫಲಂ)

ಅಕ್ಕರಂ|| ಮೂಱು ನಡುಬೆನ್ನೊಳಂ ಮೂಱ್ನಾಭಿಯೊಳ್ ಮೂಱುಂದಕ್ಷಿಣಹಸ್ತದೊಳ್ |
ಮೂಱುಂ ಬಲದ ಬರಿಯೊಳ್ ಮೂಱು ಪಿಂಗಾಲೊಳ್ ಮೂಱುಂ
ಪುಚ್ಛದಲ್ಲಿರ್ಪುವು ||
ಮೂಱೆಡದ ಕಾಲೊಳ್ ಮೂಱೆಡದ ಬರಿಯೊಳ್ ಮೂಱೆಡದ ಕೆಯ್ಯೊಳ್
ಮೂಱು ಕೃತ್ತಿಗೆಯಾದಿಯಾಗಿ ಕೂರ್ಮ(ರ್ಮಾ)ಂಗಳೊ(ದೊ)ಳ್ |
ತೋಱದ ನಕ್ಷತ್ರದೊಳುತ್ಪಾತಮಿರೆ ಪೇಟಿತ್ತಣ ನಾಡಿಂಗೊಳ್ಪಂ
ಬಿನ್ನಣ ಅಟ್ಟುಗಾ || ೬೪ ||

ವಂ|| ನಡುಬೆನ್ನಿಂ ವದನಾಗ್ರದಿಂ ಬಲದಕೆಯ್ಯಿಂ ಮುಗ್ಗುಲಿಂ ಪಾದದಿಂ |
ಪಡುವಲ್ ಕೂರ್ಮನ ಪುಚ್ಛದಂತೆಡದ ಕಾಲಿಂ ಮಗ್ಗುಲಿಂ ಹಸ್ತದಿಂ[ದೆಯ್ದೆ ಕೂ]||
ಡಿದ ಋಕ್ಷತ್ರಿತಯಂಗಳಿಂ ಕ್ರಮದಿನಾವೈಶ್ವಾನರಾ(ಕ್ನಾ)ಶಾದಿಯಂ |
ಪಡೆಮಾತೇಂ ಶನಿಯುತ್ತಲಿದೊಡೆ ಮಹಾಕ್ಷುದ್ರಾಜಿ ಶಸ್ತ್ರಾಕುಳಂ || ೬೫ ||

(ಇಂತು ಕೂರ್ಮನ ಚಕ್ರಂ)

೧೭. ನಕ್ಷತ್ರಚಾರಂ

ಶನಿ ನಕ್ಷತ್ರಚಾರಂ (೧)

ವ|| ಇನ್ನು ಶನಿಯ ನಕ್ಷತ್ರಚಾರಮಂ ಪೇಟ್ವೆಂ—

ಕಂ|| ಸಂದೆಯಮಿಲ್ಲದೆ ಮಱೆಯಾ |
ದಂದು ಕರಂ ಬಿಡದೆ ಕಱೆದು ಧಾನ್ಯಪ್ರಜಮುಂ ||
ಕುಂದದೆ ಧರೆ ಬೆಳೆದಿರ್ಕುಂ |
ಮಂದಂ ಬಂದೊಂದಿನಿಂದೊಡಾ(ಡಂ)(ದ)ಶ್ವಿನಿಯೊಳ್ || ೬೬ ||

---

1 ಷಮಾದಿ.

ಚಂ|| ಧರೆ ಬೆಳೆಗುಂ ಸಮಸ್ತ ವರಧಾನ್ಯಚಯಂಗಳನರ್ಘಮೇಱುಗುಂ |
ಭರಣಿಯೊಳರ್ಕಜಂ ನಿಲೆಯು ಭತ್ತಮನಂಜದೆ ಕೊಳ್ವುದಂತ್ಯದೊಳ್ ||
ಕರಗುಗು(ರು) ಮರ್ಘಮುಂದು ಬೆಳಸಿಲ್ಲದೆ ಪೆರ್ಚುಗುಂ ದಕ್ಷಿಣಾಪಥಂ |
ಸುರನದಿಯಿಂ ಸರಸ್ವತಿಯು ನರ್ಮದೆಯುಂ ಬೆಳಸರ್ಘಮೇಱುಗುಂ || ೮೭ ||

ಕಂ|| ಕೃತ್ತಿಗೆಯೊಳ್ ಶನಿ ನಿಲೆ ಕಿಱು |
ಕಾರ್ತಿಕೆಯೊಳ್ ಕುತ್ತುಮುಕ್ಕುಮಿಳೆಯುಂ ಬೆಳೆದಾ ||
ವರ್ತಿಸುಗುಂ ನಿಂದರ್ಘಂ |
ಚೈತ್ರಮಾಸದೊಳ್ ಕುಂದುಗುಂ ಧಾನ್ಯಚಯಂ || ೮೮ ||

ಚಂ|| ಕಡೆವೆಳಸಕ್ಕು ಮತ್ತೆಱಡು ಕಾರ್ತಿಕೆಗಂ ಸಲೆಯರ್ಘಮಾಗಿಯುಂ |
ತೊಡೆಯುನನಾಥನೆನ್ನದೆ ವಿವಾಹಮನಪ್ಪವರಲ್ಲಿ ಮೊಕ್ಕಳಂ ||
ತಡೆಯಣೆ ರೋಹಿಣೀಚಯದೊಳಂ ಶನಿ ನಿಂದೊಡೆ ನೋಡೆ ನಾಡೆಯುಂ |
ಜಡಮತಿಯಾಱು ಖಂಡುಗಮದರ್ಘಮ ನೋಡೆರೆ(ಲೆ) ಮಾಘಮಾಸದೊಳ್ ||೮೯||

ಕಂ|| ಸಲ್ಲಲಿತಮಾಗಿ ಮೃಗಶಿರ |
ದಲ್ಲಿಯೆ ಶನಿ ನೆಲಸಿ ನಿಂದೊಡಂ ಬೆಳಸಕ್ಕುಂ ||
ಮೆಲ್ಲನೆ ಚೈತ್ರಕ್ಕರ್ಘಂ |
ನಿಲ್ಲದೆ ಕೇಳಣ್ಣ ನಾಲ್ಕು ಖಂಡುಗಮಕ್ಕುಂ || ೯೦ ||

ಮ|| ಶನಿ ಬಂದಾರ್ದ್ರೆಯೊಳಿರ್ಪ ಕಾಲಮನಿತುಂ ಭತ್ತಂಗಳಂ ಮಾಱುಗೊಳ್ |
ಪನಿಯಲ್ಪಂ ಸಮನಿಕ್ಕು ಮುಂದದನೆ ಕೇಳ್ ಧಾನ್ಯಾಂಗದೇಶಕ್ಕೆ ನ ||
ರ್ಮದ ಮೆಂದಿಂತಿವನಾಳ್ವ ಭೂಪತಿಗೆ ಕೇಡಂತೆಯ್ದುಗುಂ ನಿಶ್ಚಯಂ |
ಮುನಿವಾಕ್ಯಂ ಸಮನಿಕ್ಕುಮಿಂತು ತ್ರಿಕಳಿಂಗಾ(ಗ)ದೇಶಮಂ ನಿಶ್ಚಯಂ || ೯೧ ||

ಕಂ|| ಶನಿಯಿರೆ ಪುನರ್ವಸುವಿನೊ |
ಳಿನಿತುಂ ನಿಶ್ಚಯ[1]ದಿನರ್ಘಧಾನ್ಯಂ ಬೆಳೆಗುಂ ||
ಜನಕಂ ಬಡಗಣ ಕೌಶಲ |
ದವನೀಪತಿಯು ರುಜೆಯಿಂದೆ ಸಾಯ್ಗುಂ ದಿಟದಿಂ || ೯೨ ||

ಮಂಡಲವರ್ಷಂ ಪುಷ್ಯದೆ |
[2]ಚಂಡಕರ ಪ್ರಿಯತನುಜನೊಸೆದಿರ್ದಾಗಳ್ ||
ಕೊಂಡುಂ ಮಡಗಿಡು ಭತ್ತಮ |
ಮಂಡಲದೊಳ್ ಪಡೆಯಲಾಱರೆಂದರ್ ಗಾರ್ಗ್ಯರ್ || ೯೩ ||

1 ಮಿರನ. 2 ಭಂಡಲರವಿ, ಚಂಡವರ ಪ್ರಿಯ.

*ಮ||ಸ್ರ|| ಶನಿ ಬಂದಾಶ್ಲೇಷೆಯೊಳ್ ತಾನೊಸೆದು ನೆಲಸಿದಂದಣ್ಣ ಧಾನ್ಯಂಗಳೆಲ್ಲಂ |
ಮುನಿಯುಂ ಪೇಳ್ದಿಷ್ಟದಿಂದಂ ಬೆಳೆಗುಮತಿಶಯಂ ಕಾಲ[1]ಮಿನ್ನೊಳ್ಳಿತಕ್ಕುಂ ||
ವನಜಾಕ್ಷೀ ಸೌರಿಯಲ್ಲಿಂ ತಳರ್ದು ಮಘೆಯೊಳಿರ್ದಂದು ಕಾಯ್ವ (ಂತ) ಪೂರ್ವಂ |
ಜನಕೆಲ್ಲಂ ತೋಱುಗುಂ ದುರ್ನಯಮುಪಸದಳ ಮೆನೆ ತೋರ್ಕುಮಾಕಷ್ಟ[2]ದಿಂದಂ|| ೯೪ ||

ಕಂ, ಸಸಿಗೆ ಬಱಿನಕ್ಕು ಮರ್ಘಂ |
ಕುಸಿಗುಂ ನೃಪರಧಿಕಮೊಕ್ಕಳಂ ಪೀಡಿಸುಗುಂ ||
ಪುಸಿಯಲ್ತು ಮಘೆಯೊಳಿರೆ ಶನಿ |
ಸಸಿವದನೇ [3]ಬಗೆದುಕೊಳ್ಳ ತಾಂ ಪಸಮಕ್ಕುಂ || ೯೫ ||

ಮ|| ಸವಿಶೇಷಂ ಬೆಳಸಕ್ಕು ಮಾದೊಡಧಿಕಂ ಛತ್ರಂಗಳಂ ಮಾಱುಗೊಂ |
ಡವನಿಂಬಾಗಿರೆ ಬಯ್ತು ಕೊಂಡಿಡು ಗಡಾ ದುರ್ಭಿಕ್ಷಮುಂ ಕುತ್ತಮುಂ ||
ಸವನಿಕ್ಕುಂ ಸಲೆ ಧೂಮಕೇತು ಗಗನಾಕಾರಂಗಳೊಳ್ ಮೂಡುಗುಂ |
ರವಿಜಂ ಪೂರ್ವೆಗೆ ಬಂದೊಡಿಂತಿನಿತುಮಂ ಮಾೞ್ಕುಂ ಮಹೀರಂಗದೊಳ್ || ೯೬ ||

ಕಂ|| ಉತ್ತರೆಯೊಳ್ ಶನಿ ನಿಲೆ ಕೇ |
ಳುತ್ತಮಮದು ಪಿರಿದು ಮೂಱುಖಂಡುಗಮಕ್ಕುಂ ||
ಬಿತ್ತರದೆ ನೆಲಸಿ ನಿಲ್ಲದೆ |
(ಉ)ಬತ್ತಮನೆಲೆ ಮರುಳೆ ಕೊಂಡು ಬಯ್ತಿಡು ಬೇಗಂ || ೯೭ ||

ಮ|| ಬೆಳಗುಂ ಧಾನ್ಯಚಯಂಗಳೆಲ್ಲಮಧಿಕಂ ವಿಸ್ತಾರದಿಂ ಹಸ್ತದೊಳ್ |
ನಳಿನಾಕ್ಷೀ ಶನಿ ಬಂದು ತಾಂ ನೆಲಸಿದಂದಿಷ್ಟಾರ್ಥದಿಂ [4]ಸೃಷ್ಟಿಯೊಳ್ ||
ಮುಟಿ ಕೊಳ್ಗುಂ ಪಿರಿದರ್ಘಮಕ್ಕು ಮುದದಿಂದಾದೆಲ್ಲಮಂ [5]ಕೇಳ ನೀ |
ನಿಳೆಯಾಳ್ದಂಗೆ ನರಾಧಿಪಂಗೆ ಪಿರಿದುಂ ಪೊಲ್ಲೆಂಬುದುಂ ನಿಶ್ಚಯಂ || ೯೮ ||

ಕಂ|| ಚಿತ್ತೆಯೊಳೆಸೆದಿರೆ ಶನಿಯುಂ |
ಬಿತ್ತರದಿಂ ಬೆಳೆಗು ಬೆಳಸು ಪಿರಿದುಂಟರ್ಘಂ |
ಚಿತ್ತೈಸಿ ಕೇಳು ನೀನವ |
ನುತ್ತಮದ್ಯೆವಜ್ಞ ಬಲ್ಲ ತದ್ವಿಷಮದೊಳಂ || ೯೯ ||

ಮಲ್ಲಿಕಾಮಾಲೆ|| ಭೂತಳಂ ಬೆಳೆಗುಂ ಸಮಸ್ತ ವಿಶೇಷದಿಂ ಧನಧಾನ್ಯದಿಂ |
ಪ್ರಿತಿಸೂವುದು ಚಿತ್ತವೃತ್ತಿಯೊಳಿರ್ಪರಾ ಮನುಜರ್ಕಳುಂ ||
ಸ್ವಾತಿಯೊಳ್ ಶನಿ ಬಂದು ತಾಂ ನೆಲಸಿರ್ದೊಡಂದು ಸುಭಿಕ್ಷ ಮಾ |
ಮಾತು ತಪ್ಪದು ತಪ್ಪಲಕ್ಕುಮೆ ಸೋಮನಾಥಮತೋಕ್ತಿಯಿಂ || ೧೦೦ ||

---

1 ಮೇನೋ. 2 ಮೆಂದುಂ. 3 ಬಗೆಮುಕೊಳ್ಗೆ, ಬಗೆದುಕೇಳ್ ತಾಮುಬ್ಬಸಮಕ್ಕುಂ. 4 ಸ್ತ್ರೀ ಪ್ರಿಯಂ. 5 ಕೇಳಿರೈ.

*ಶನಿ ಬಂದಾಶ್ಲೇಷೆಯೊಳಂ । ತನುನಯದಿಂದಾಗ ನೆಲಸಿದಂದಾಧಾನ್ಯಂ ||
ಮುನಿ ಪೇಳ್ದನಿಷ್ಟದಿಂದಂ । ಜನಕೊಳ್ಳಿತು ಧರೆಯೆ ಬೆಳೆಗುಮೆಂದಂ ಅಟ್ಟಂ ||

—ಒಂದು ಪ್ರತಿಯಲ್ಲಿ ಮೇಲಣ ಪದ್ಯಕ್ಕೆ ಪ್ರತಿಯಾಗಿ ಈ ಕಂದಗಳಿವೆ.

ಕಂ|| ಬಂದು ವಿಶಾಖೆಯೊಳಿರೆ ಶನಿ |
ಕುಂದುಗುಮರ್ಘಂ ಕಡಂಗಿ ಕಾರ್ತಿಕೆಯೊಳ್ ಸಲೆ ||
ಸಂದಿಸುಗುಂ [ಬೆಳಸು] ಪಿರಿದ್ಧ|
ನಿಂದಿತಗುಣ ಮೊಳ್ಪದೆನಲು ಬೆಳಸಿಂಗಕ್ಕುಂ || ೧೦೧ ||

ಉ|| [4]ಓಟಿಯೆ ಪೋಜೆಯಿಂದೆ ಚಯಿ(ಜ್ಯೈ)ತ್ರದೆಡೆಗರ್ಘಮುಮೇಱ ಬೞಕ್ಕೆ ಕುಂದುಗುಂ |
ಪಾಟಿಸಿ ಮೂಱುಮೂಱುವರೆ ಖಂಡುಗದರ್ಘದೆ ಮತ್ತಮಂತೆ ತಾಂ ||
ತಾಟಿಸಿ ಧೂಮಕೇತು ನೆಗೆದಂ ಸಲೆ ಡಾಮರಮಕ್ಕು ಮೆಲ್ಲಿಯುಂ |
ಕೂಟಮನಾಸೆಗೆಯ್ಗು(ಯ್ದು) ಶನಿ ಬಂದನುರಾಧೆಯೊಳಿರ್ಪ ಕಾಲದೊಳ್ || ೧೦೨ ||

ಕಂ|| ಒಂದನೆ ಶನಿ ಜ್ಯೇಷ್ಠೆಯೊಳಿರೆ |
ಕುಂದುಗುಮರ್ಘಂ ಕಡಂಗಿ ಪಸವಂ(ತ)ದಕ್ಕುಂ ||
[1]ಸಂದೆಯಮೇಂ ನರ್ಮದೆವರ |
ಮೊಂದೆಡೆ ಕಡೆವೆಳೆಸುಮಂತೆ ಕುಮ್ಮರಿ ಬೆಳೆಗುಂ || ೧೦೩ ||

ಚಂ|| ಇಳೆ ಬೆಳೆಗುಂ ಸಮಸ್ತ ಧನಧಾನ್ಯಚಯಂಗಳನಿಂತು ಮೂಲದೊಳ್ |
ತಳರದೆ ಪೂರ್ವಷಾ[2]ಢೆಯೊಳಿರಲ್ ಬೆಳಸರ್ಘಮುಮಕ್ಕುಮಾಗಿಯುಂ ||
[3]ಕಲಿವೆಯುನಾಳಿಯುಂ ಪಿರಿದು ತುಂತುರುವಕ್ಕುಮದಂತೆ ಕಾಲದಿಂ |
ದಿಳೆವೆಳೆ ಪೂರ್ವದೇಶದೊಳೆ ಡಾಮರ ಮಧ್ಯದೊಳಕ್ಕುಗುಂ ಗಡಾ || ೧೦೪ ||

ಶಾ|| ಶ್ರೀಶೈಲಾಗ್ರದ ದೇಶಮೆಲ್ಲ ಬೆಳೆಗುಂ ಕುಂದರ್ಘಮಂತಾಗಿಯುಂ |
ಲೇಸಾಗೊಪ್ಪುವ ಪೂರ್ವಷಾಢ[4]ದೊಳಿರಲ್ ಲೀಲಾಮಹೋತ್ಸಾಹದಿಂ ||
ದೇಶಂ ಗಾರ್ಗ್ಯಮುನೀಂದ್ರವಂದ್ಯ(ಚಂದ್ರ)ನಿದುನಂ ಪೇಳ್ದಂ ಗಡಾ ಮಾೞ್ಕೆಯಿಂ |
[5]ಶ್ರೀಶಂ ಪೇೞ್ದುಪದೇಶದಿಂದೆ ನುಡಿದಂ ಕಾರ್ಯಾರ್ಥದಿಂ ನಿಶ್ಚಯಂ || ೧೦೫ ||

ಕಂ|| ಉತ್ತರಷಾಢೆಯೊಳಿರೆಯುಂ |
ಬಿತ್ತಮುಮರಿದಕ್ಕುಮರಸುಗೆಯ್ವ(ಯ್ದು)ರ್ ಸಾಗುಂ ||
ಬಿತ್ತರದಿಂ ಶ್ರವಣದೆ ಶನಿ |
ಕುತ್ತುಮುಮಂತಲ್ಪಮಾಗೆ ಮೞೆಯುಂ ಮಾೞ್ಕುಂ || ೧೦೬ ||

ಮ|| ರವಿಜಂ ಬಂದು ಧನಿಷ್ಠೆ[6]ಯೊಳ್ ನೆಲಸಿದಂದರ್ಘಕ್ಷಯಂ ಕುಂದುಗುಂ |
ಸವಿಶೇಷಂ ಮಡಗಿಟ್ಟಭಂಡಮವು [7]ತಾನಿಕ್ಕಂಡುಗಂ ಮಾಱುಗುಂ ||
ಕವಿ ಪೇಳ್ದಂತಿರೆ ಧೂಮಕೇತು [8]ನೆಗೆಗುಂ ಗೋದಾವರೀತೀರದಂ |
ದವಿಕಲ್ಪಂ ಬೆಳಸಕ್ಕುಮಾಗದು(ರು)ಗಡಾ ಕಾಶೀನದೀತೀರದೊಳ್ || ೧೦೭ ||

ಕಂ|| ಶತಭಿಷೆಯೊಳ್ ಶನಿ ಬೞಗುಂ |
ಮತಿವಂತೇ(ತಾ) ಬೆಳಸುಮಿಲ್ಲ ಪೆರ್ದೊಱೆಯು ಮಹೀ ||
ಪತಿ ಸಾಯ್ಗುಂ ಕಿಱುಕಾರ್ತಿಕ |
ಸಿತದಷ್ಟಮಿಯಾದಿಯಾಗಿ ಮಂಡಲವರ್ಷಂ || ೧೦೮ ||

1 ಸಂದೇಹಮೆ ನರ್ಮವತಿಯುಂ ಮುಂದಿಡೆ. 2 ಢದೊಳು ಕಾಲ್ಬೆಳಸ. 3 ಕಳವೆಯೊಳಗಿಯುಂ 4 ದಱರಮ. 5 ಶ್ರೀಯಿಂಶಂ. 6 ದೊಳ್ ಶನಿ ನಿಲೆನೆಲೆದ. 7 ತಾಬೀಱಿಂ, ತಾಬಿಱ. 8 ಪೊಗೆಗುಂ.

ಮ|| ಇದು ಗೋದಾವರಿಯಿಂ ಸಮುದ್ರದೊಳಗೆಲ್ಲಂ ಕೇಳಿರೈ ವೃಷ್ಟಿಯಂ |
ಬಿದೆಯಕ್ಕುಂ ಗಡ ಕಾರಪುಣ್ಣಿಮೆಯೊಳಂ ಸಂತೋಷದಿಂ ಗೋಕುಲಂ ||
ವಿದಿತಂ ಕೇಳ್ ಕಱಿಗುಂ ಧರಿತ್ರಿಬೆಳೆಗುಂ ನೆಲ್ [1]ನಿಲಲುಮೊದೆತ |
ಪ್ಪದುನಿತ್ತೋಡಿರೆ ಪೂರ್ವ(ರ್ಣ) ಭಾದ್ರಪದದೊಳ್ ಸಂತೋಷಮಕ್ಕುಂಗಡಾ||೧೦೯||*

(ಇಂತು ಶನಿಚಾರಂ)

ಪುನರುಕ್ತಶನಿಚಾರಂ (೨)

ವ|| ಪುನರುಕ್ತ ಶನಿಚಾರಮಂ ಪೇೞ್ವೆಂ—

ಕಂ|| ಶ್ರೀಮತ್ಸರ್ವಜ್ಞಂಗೆ ಮಂ |
ನೋಮುದದಿಂದೆಱಗಿ ಶನಿಯ ಚಾರದ ಫಲಮಂ ||
ಭೂಮಂಡಲಕ್ಕೆ ಹಿತಮೆಂ |
ದೀ ಮಾೞ್ಕೆ[2]ಯೊಳಱದು ಪೇೞ್ದನಚಳಿತವಚನಂ || ೧೧೦ ||

†ಅಶ್ವಿನಿಯೊಳ್ ಶನಿಯಿರೆ ತಾ(ಯು)ಂ |
ನಿಸ್ಸಂಶಯಮಾಗಿ ಬೆಳೆವುದರ್ಘಮುಮು(ಮಂದ)ಕ್ಕುಂ ||
ಕಾಶೀದೇಶದೊಳಂ ವಾರ |
ಣಾಸಿಯ ಪೆರ್ದೊಱೆಯ ತಡಿಗಳು [3]ಭಯಂ ಬೆಳೆಗುಂ || ೧೧೧ ||

ಭರಣಿಯೊಳಿರೆ ಶನಿ [4]ನೆಲನಂ |
ತಿರೆ ಸದ್ಯಂ ಬೆಳಸುಮಕ್ಕುಮರ್ಘಂ ಕುಸಿಗುಂ ||
[5]ಶರಧಿಯ ಬಳಸಿದ ಸೀಮೆಯ |
ವರರ್ಗೆಲ್ಲಂ ಶೋಕಮಕ್ಕು ರುಜೆಯುಂ ಪಿರಿದುಂ || ೧೧೨ ||

ಇರೆ ಶನಿ ಕೃತ್ತಿಗೆಯೊಳ್ ಕಡು |
ಪಿರಿದಾಗಿರೆ ಬೆಳೆಗುಮಲ್ಲಿ ಮಱೆಯಕ್ಕುಂ ಮುಂ ||
ದಿರೆ [6]ಪಸವಕ್ಕು ಗೋದಾ |
ವರಿ ಯಿರ್ತಡಿ ಬೞಗುಮುೞದೆಡೆ ಕಱಿಗುಂ || ೧೧೩ ||

ನಿಲೆ ಶನಿ ರೋಹಿಣಿಯೊಳ್ ಮಂ |
ಡಲ ವರ್ಷಮುಮಾಗಿ ಬೆಳೆಗು ಮಲ್ಪಂ ಬೆಳಸುಂ ||
ಫಲಮಾಗಿ ಪುಷ್ಯಮಾಸದ |
ತ(ಸ)ಲೆಯೊಳ್ ಬೞಕರ್ಘಮಿೞಗು ನಾಗುಳಮಕ್ಕುಂ || ೧೧೪ ||

---

1 ನೆಲಂ ನಿಲಲುನೋಡಿರೆ ತ. 2 ಯೊಳಿರ್ದನಲ್ತೆ?ಅಚಳಿತವಚನಾ. 3 ಳತ್ತಡೆ, ಳಿರ್ತಡಿ? 4 ತಾನುಂ ಧರೆಯೊಳಂ ಬೆಳಸು ಪಿರಿದುಮರ್ಘಂ ಪೆರ್ಚುಗುಂ, ಪಿರಿದು ಪೆರ್ಚುಗು ಮರ್ಘಂ. 5 ಸಜಿಸ...ಜಗುನೆಯ। ಪರಿದೆಡೆಯಿರ್ತಡಿಯುಮೆಯ್ದೆ ಬೆಳೆಗುಮನೋಘಂ. 6 ಫಲಮಕ್ಕುಂ .........ಯಿರ್ತಡಿಯತ್ತ ಶುಭನ(ದ) ಮಕ್ಕುಂ ಜಟ್ಟಾ.

*ಇಲ್ಲಿ ಉತ್ತರಭಾದ್ರೆ, ರೇವತಿ ಈ ಎರಡು ನಕ್ಷತ್ರಗಳ ಫಲ ಬಿಟ್ಟುಹೋಗಿದೆ.

†ಈ ಪದ್ಯದ ಪ್ರಾಸು ವಿಲಕ್ಷಣವಾಗಿದೆ, ಶ್ವಿ, ಸ್ಸ, ಶೀ, ಸಿ—ಅಕ್ಷರಗಳಿಗೆ ಪ್ರಾಸಿದೆ.

ಕಂ|| ನೃಗಶಿರದೊಳ್ ಶನಿಯಿರೆ ಕಾ |
ರ್ತಿಗಕಿಕ್ಕಂ(ಖ್ಖಂ)ಡುಗವೆ ಭತ್ತಮರ್ಘಂ ಬಱಿಕಂ ||
[1]ಅಗಣಿತ ವಿಡ್ಡ್ವರವಕ್ಕುಂ |
ಜಗದೊಳಗಿದ ತಿಳಿಯೆ ಪೇೞ್ದ ನ(ರ)ಭಿನವಗಾರ್ಗ್ಯಂ(ರ್) || ೧೧೫ ||

ಶನಿಯಾರ್ದ್ರೆಯೊಳಿರಲಲ್ಪವೆ |
ಪನಿಯಕ್ಕುಂ ಧರೆಯೊಳರ್ಘಮಕ್ಕುಂ ಭತ್ತಂ ||
ಸನಿಯದೆ ತಾಂ ಕಡೆ ಬೆಳೆಗುಂ |
ಯಿನಜೆಯು ನರ್ಮದೆಯು ನಡುವಣರಸುಗಳೞಿಗುಂ || ೧೧೬ ||

ಶನಿಯಿರೆ ಪುನರ್ವಸುವೊಳ್ |
ಸನಿಶ್ಚಯಂ ಸರ್ವಧಾನ್ಯಮೆಲ್ಲಂ(ತ್ತಂ) ಬೆಳೆಗುಂ (ಜಗದೊಳ್) ||
[2]ಜನವೊಳ್ಪಂ ಪಡೆಗುಂ ಬಡ |
ಗನಾಡ ಕೌಶಲದ ನೃಪತಿ ರುಜೆಯಿಂ ಸಾಯ್ಗುಂ || ೧೧೭ ||

ಶನಿ ಪುಷ್ಯದೊಳಿರಲಲ್ಪಂ |
ಪನಿಯಾದಂದಾದೆ ಕಾರ್ತಿಕಾಂತ್ಯಂ ಬರೆಗಂ ||
ಜನಿಯಿಸುಗುಂ(ಪುದು) ಮಂಡಲವರ್ಷಂ |
ಜನಪಂಗತಿ ಹರ್ಷಮೆಂದನ(ರ)ಭಿನವಗಾರ್ಗ್ಯಂ(ರ್) || ೧೧೮ ||

ಮಂದಂ ಬಂದಾಶ್ಲೇಷೆಗೆ |
ನಿಂದಂದತಿಹರ್ಷಮಕ್ಕುಮ ರ್ಘಂ ಕುಸಿಗುಂ ||
ಸಂದಿರ್ದ ಮಾಳವಾಧಿಪರ್ |
[3]ಸಂದೆಯುಮೇನಱಿವರೆಂದ ಅಟ್ಟಿವೆಡಂಗಂ || ೧೧೯ ||

ನಿಲೆ ಮಘೆಯೊಳ್ ಶನಿ ಬಱಸಿಂ |
ದಲೆಗುಂ ಬೆಳಸುಂ ಕನಿಷ್ಠಮಕ್ಕುಂ ನೆಲದೊಳ್ ||
ಕಲಹಂ ಪೊಣ್ಮುಗುಮುದ್ಯ |
ದ್ವಿಲಸಿತ ಕಾಂಚೀಸುರಾಷ್ಟ್ರಪತಿಗಳ್ ಸಾವರ್ || ೧೨೦ ||

ಇರೆ ಶನಿ ಪೂರ್ವೆ(ಪುರ್ಬೆ)ಯೊಳಂ ತಾಂ |
ವರುಷಂ ಬೆಳಸಿಲ್ಲ ಕುಸಿಗುಮರ್ಘಂ ಗೋದಾ ||
ವರಿಯಿಂ ಬಡಗಲ್ ಕುತ್ತಂ |
ಪಿರಿದಕ್ಕುಂ [4]ವೆಂಗಿನಾಡ ನಾಳ್ವಂ ಸಾವಂ || ೧೨೧ ||

ಉತ್ತರೆಯೊಳ್ ಶನಿ ನಿಲೆ ಮೞೆ |
ಪತ್ತುಗೆ ಬೆಳೆ ಬೆಳೆಗುಮರ್ಘಮುಂ ಕುಂದಿರ್ಕುಂ ||
ಭತ್ತಂ ಪ್ರಿಯಮಕ್ಕುಂ ಪಶು |
ಗು(ಕು)ತ್ತಂ ಗೊಂಡಱಿಗುಂ ಬಱಿಕೆ ಮಾನಸರೞಿವರ್ || ೧೨೨ ||

1 ಬರೆವಡೆ. 2 ವಿನಯದ ಕೌಸಲದೇಶದ. 3 ರಂದಱಿ(ದಿ)ಗುಂ ತಪ್ಪದೆಂದನಭಿನವಗಾರ್ಗ್ಯರ್.
4 ಮೆಂದನಲ್ತೆ ಅಟ್ಟಿವೆಡಂಗಾ.

ಕಂ|| ಹಸ್ತದೊಳಿರೆ ಶನಿ ಬಱದೊಳ್ |
ದುಸ್ತರಪ್ರಜೆ ರುಜೆಯೊಳೞಗುಮರ್ಘಮುಮಿೞಗುಂ ||
ವಿಸ್ತರಿಕುಂ ಮೂಗುಳದೊಳ್ |
ಸ್ವಸ್ತಂ ನಿಲೆ ಗಂಗಮಂಡಳೀಕರ್ ಸಾವರ್ || ೧೨೩ ||

ಚಿತ್ತೆಯೊಳರ್ಕಜನಿರ್ದಂ |
ದುತ್ತಮ ಕಾರ್ ಬೆಳೆಗುಮಲ್ಲಿ ಕಡೆವೆಳಸಕ್ಕುಂ ||
ಛತ್ರಂ ಪ್ರಿಯಮಕ್ಕುಂ ಪ್ರಜೆ |
ಚಿತ್ರಕ್ಷ(ಕ್ಷಿ)ತಿಯಿಂದೆ ಧರ್ಮಮಂ ಕೆಯ್ಕೊಳ್ಳ(ಳ್ವ)ರ್ || ೧೨೪ ||

ಸ್ವಾತಿಯೊಳಿರೆ ಶನಿಯುಮ |
ತೀತಂ ಬೆಳಸಕ್ಕು ಮರ್ಘಮಕ್ಕುಂ ಸೌಖ್ಯ ||
ವ್ರಾತಂಗಳ್ ಪ್ರಜೆಗಕ್ಕುಂ |
[1]ಖ್ಯಾತ ಕಳಿಂಗಾಧಿನಾಥಗಂ ಸಾವಕ್ಕುಂ || ೧೨೫ ||

ಶನಿ ನಿಲೆ ವಿಶಾಖೆಯೊಳ್ ಬೆಳ |
ಸಿನಿಸಕ್ಕುಂ ತೆಂಕನಾಡ ಛತ್ರಂ ಪ್ರಿಯಮಿಂ ||
ತನುಪಮ ಮಾಳವ ದೇಶದ |
ಜನಪತಿ ಗೞವಕ್ಕು ಧೂಮಕೇತುಗ[2]ಳೊಗೆಗುಂ || ೧೨೬ ||

ಚಂ|| ಶನಿಯನುರಾಧೆಯಲ್ಲಿರೆ ನೆಲಂ ಬೆಳೆಗುಂ ಮಿಗೆ ಚೈತ್ರಮಾಸದಂ |
ದನುನಯಮಾಗೆ ಪೆರ್ದೊಱೆಯ ತೆಂಕಲೆ ಪೆರ್ಗಸಮಕ್ಕು ಡಾಮರಂ ||
ಘನಪಥದಲ್ಲಿ ಕೇತುವೊಗೆಗುಂ ಬೞಕಂತೆ ವರಾಟ(ದನಾಳ್ವ) ನಾಥನಾ |
ಶ್ವರನೃಪ ಸಾಗು ಮಿಾಥರೆಗೆ ದುರ್ನಯಮೆಂದಪನಲ್ತೆ ನಿರ್ನಯಂ || ೧೨೭ ||

ಕಂ|| ಜ್ಯೇಷ್ಠೆಯೊಳಿರೆ ಶನಿ ಬೆಳಸು ಕ |
ನಿಷ್ಠಂ ಕೊಱೆ ಬೆಳೆಗುಮಲ್ಪವಿಳೆಗಂ (ಸಲೆ) ಸಂ ||
ತುಷ್ಟಂ ಮಂಡಲವರ್ಷಂ |
ಸೃಷ್ಟಿಯ ಜನ ಕಿಡುಗುಮೆಂದನಭಿನವಗಾರ್ಗ್ಯಂ || ೧೨೮ ||

ಇರೆ ಶನಿಮೂಲದೆ ಗೋದಾ |
ವರಿಯಿಂದಂ ತೆಂಕಣದೆಸೆಗೆ ಪಸವುಂ ಬಡಗಂ ||
ನಿರುತಂ ಕಡೆವೞೆಯಾಗದು |
ಧುರದೊಳಗಂದು ಮಧ್ಯದೇಶದರಸಂ ಸಾಗುಂ || ೧೨೯ ||

ಶನಿಯಿರೆ ಪೂರ್ವಾಷಾಢೆದೊ |
ಳನವರತಂ ಮೞೆಯುಮಕ್ಕು ಬೆಳಸಕ್ಕುಂ ಗೋ ||
ಧನಕೆಲ್ಲ ಮಾರಿಯಕ್ಕುಂ |
ಜನಪಂ ಗೊಳ್ಪಕ್ಕುಮೆಂದನಭಿನವ[3]ಗಾರ್ಗ್ಯಂ || ೧೩೦ ||

1 ಖ್ಯಾತಂ ಕಳಿಗದೇಶನಾಥಗಂ, 2 ಳೞುಗುಂ. 3 ಚಂದ್ರಂ.

ಕಂ|| ಪ(ನ)ಡೆದು ಶನಿಯುತ್ತರಾಷಾ |
ಢದೊಳಿರೆ ಕಾರಲ್ಪವಾಗಿ ಕಡೆವೆಳಸುಂ ತ ||
ಪ್ಪದೆ ಬೆಳೆಗುಂ ವೆಂಗಿನಾಡಂ |
ಪಂದವಾಗಿರೆ ಬೇಡರಾಗಳುಂ ಬಿಡದಲೆವರ್ || ೧೩೧ ||

ಶ್ರವಣದೊಳಿರೆ [1]ಮಱೆಗಳ್ |
ಪವಣಿಲ್ಲದೆ ಬೆಳಸುಮಕ್ಕು ಮೂಡಣನಾಡಂ ||
ಕವಿದಿಱಿಗುಂ ಬೇಡರ್ ಡಾಮರ |
ಭುವನದೊಳೆರಡಕ್ಕೆ ಕಾರ್ಯನಾಶಮುದಕ್ಕುಂ || ೧೩೨ ||

ನಿಲೆ ಶನಿ ಧನಿಷ್ಠೆಯೊಳ್ ಮಱೆ |
ಸಲೆ ಕೊಳ್ಗುಂ ಚೈತ್ರಕಿಕ್ಕಂ(ಖ್ಖಂ)ಡುಗ ದಲ್(ಮುಂ) ||
ಫಲಮಂ ತಾವೀಯಂದೆ ಯುಲು |
ಸಲೆಯುಕ್ಕುಂ ಧೂಮಕೇತು ತಪ್ಪದವೋಘಂ || ೧೩೩ ||

ಇರೆ ಶನಿ ಶತಭಿಷೆಯೊಳ್ ನೃಪ |
ರರಸಿಯುರಾ ಮಾರ್ಗಶಿರಕೆ ಕಿಚ್ಚಂ ಪುಗುವರ್ ||
ಧರೆಗಂ ಮಾರಿಯು ಪಸವುಂ |
ತಿರದಕ್ಕುಂ ಕಾಂಚೀಪತಿ[2] ಕಳಿಂಗರ್ ಕಿಡುವರ್ || ೧೩೪ ||

ನರ್ಮದೆಯಿಂ ಗೋದಾವರಿ |
ಯಿಮಕ್ಕುಂ ಪೆರ್ದೊಱೆಯ ತೆಂಕನಾಡುಂ ಬೆಳೆಗುಂ ||
ಪೆರ್ಮಾರಿ ಪೊಯ್ಗು (ಕೊಳ್ಗು) ಮಲ್ಪವು |
ದೆರ್ಮೆಗೆ ಗಜತುರಗ ಗೋಕುಲಕ್ಕಂ ಮರಣಂ || ೧೩೫ ||

ಚಂ|| ಇರೆ ಶನಿ ಪೂರ್ವಭಾದ್ರಪದದೊಳ್ ಮಱೆಯುಂ ಬೆಳಸುಂ ವಿಶೇಷಮಾ |
ಧರೆಯೊಳೆ ಗೋಕುಲಂ ಕಱೆಗು ಮಿಂಚಿನ ಪೆರ್ದೊಱೆಯಿಂದೆ ತೆಂಕಲುಂ ||
ಕರಮೆ ಸುಭಿಕ್ಷಮಾ [3]ಪುರಮ ಪಾಟಲಿಪುತ್ರಮಹೀಶರಿರ್ವರುಂ |
ಮರಣಮನೆಯ್ದುವರ್ ಪಿರಿದು ದುರ್ನಯಮೊಂದಪ ಅಟ್ಟುಗಾಂಕನುಂ || ೧೩೬ ||

ಕಂ|| ಉತ್ತರ ಭಾದ್ರಾಪದದೊಳ್ |
ಮತ್ತಂ ಶನಿ ನೆಲಸಿರಲ್ಕೆ ಮಱೆ ಬೆಳಸುಂ ತೆಂ ||
ಕತ್ತಲ್ ಮಧುರೆಯರಸಱಿಗು |
ಮತ್ತ ಗುಣಂ [4]ಪಲರುಮುಕುಟಬದ್ಧರ್ ಸಾವರ್ || ೧೩೭ ||

1 ಮಱೆ ತಾಂ ಪವಣಿಲ್ಲಮಲ್ಪಬೆಳಸು ಮೂಡಳನಾಡಂ......ಸಕಲಕಾರ್ಯ ವಿನಾಶಂ. 2 ಗಳೆಲ್ಲರ್.
3 ಪುರದ. 4 ಪಲರುಮುಕ್ಕು ಭಟರ್ ಸಾರ್ಗುಂ.

ಕಂ|| ರೇವತಿಯೊಳ್ ಶನಿ ನಿಲೆ ಕಡೆ |
ಯು ವೆಳಸುಂ ಬೆಳೆಗುಮಲ್ಲಿ ಕಾರಲ್ಪಂಗಳ್ ||
ಭಾವಿಪೊಡಾಶ್ವಯುಜಕೆ ಕಾಂ |
ಚೀವಲ್ಲಭರಟಿಗುಮಿಕ್ಕ ಭಂಟರುಮಟಿಗುಂ || ೧೩೮ ||

(ಇಂತು ಪುನರುಕ್ತ ಶನಿಚಾರಂ)

ಶನಿಯ ರಾಶಿಚಾರಫಲಂ (೩)

ವ|| ಶನಿಯರಾಶಿ ಫಲಮಂ ಪೇೞ್ವಂ—

*ವ|| ೧. ಮೇಷದೊಳ್ ಶನಿಯಿರೆ ಚಕ್ರಗೊಟ್ಟ(ಡ್ಡ)ಮಕ್ಕುಂ, ಹೊಂಗೆ(ಪೊನ್ನೆ) ಜೋಳಂ ನಾಗಂಡುಗಮಕ್ಕುಂ. ೨. ವೃಷಭದಲ್ಲಿ ಶನಿಯಿರೆಯುಂ ಕರ್ನಾಟಕ ಚಿತ್ರಪುರಿಯುಂ ಕಿಡುಗುಮನ್ಯಾಯಮಕ್ಕುಂ, ಯಮುನೆಯೆಂಬ ತೊಱೆಯ ತಡಿಯಲ್ಲಿ ಧರ್ಮಂ ಪೆರ್ಚುಗುಂ, ಜೋಳಂ ಪತ್ತುಕೊಳಗಮಕ್ಕುಂ, ಬೆಳುವಲನಾಡು ಕೆಟ್ಟು ಜೋಳಂ ಪತ್ತುಬಳ್ಳಮಕ್ಕುಂ. ೩. ಮಿಥುನದಲ್ಲಿ ಶನಿಯಿರೆ ಕಳಿಂಗದೇಶದ ಬೇಡರ್ಗೆ ಸುಖಮಕ್ಕುಂ, ಪರ್ವತದೇಶಕ್ಕೆ ಕ್ಷಾಮ ಮಕ್ಕುಂ, ಗಂಗವಾಡಿ ಕಿಡುಗುಂ. ೪. ಕರ್ಕಾಟಕದಲ್ಲಿ ಶನಿಯಿರೆ ಕಂಚಿಯುಂ, ಬಾದಾವಿಯುಂ, ಗೋದಾವರಿ ತಡಿಯುಂ ಕಿಡುಗುಂ, ವಂಗದೇಶದರಸಟಿಗುಂ, ಆರ್ಘಮೊಂದು ಖಂಡುಗಮಕ್ಕುಂ. ೫. ಸಿಂಹದೊಳ್ ಶನಿಯಿರಲ್ ಕರಿತುರಗಾಗಿ ಪಲಂಬರಸುಗಳಟಿವರ್, ಉಳಿದರಸುಗಳ್ ತೊಱೆ ವಾಯ್ದೋಡುಗುಂ, ಗಂಗಾನದಿಯಿಂ ಪೆರ್ದೊಱೆತನಕ ಬಱನಕ್ಕು ಪಾಂಡ್ಯದೇಶಂ ಕಿಡುಗುಂ. ಇನ್ನುೞಿದ ಕನ್ನೆ, ತೊಲೆ, ವೃಶ್ಚಿಕ, ಧನುರ್ಮಕರ ಕುಂಭ ಮೀನ ರಾಶಿಗಳಲ್ಲಿ ಶನಿಯಿರಲ್ ಶುಭಾಶುಭಂಗಳಿಲ್ಲಂ.

(ಇಂತು ಶನಿಯ ರಾಶಿಚಾರಫಲಂ)

ಗುರುರಾಶಿಚಾರಫಲಂ (೪)

ವ|| ಇನ್ನು ಗುರುಚಾರ ಫಲಮಂ ಪೇೞ್ವಂ—

ಕಂ|| ಕುಱಿಯಂ ಸುರಗುರುವೇಱಲ್ |
ನೆಱೆ ತೋರ್ಕುಂ ಮಟಿಯು ಮರ್ಘಮುಂ ಧನಧಾನ್ಯಂ ||
ತುಱುಮಱ(ವೆಯ್ದಿ) ಸಾಗ್ರಂ [1]ಯುಜ್ಞ |
ಕ್ಕೆಱಗಿರ್ಪರ್ ದ್ವಿಜರೆ ಪಿರಿದು ಸಂತಸ[2]ದಿಂದಂ || ೧೩೯ ||

ವೃಷಭದೊಳೊಂದಿರೆ ಗುರು ಪೆ |
ರ್ವಸದಿಂದಂ ಗೋಕುಲಂಗಳುಂ ಬಾಲಕರುಂ ||
ಸಸಿಯುಂದು ಕ್ಷಯಮಕ್ಕುಂ |
ವಸುಮತಿ ಬೆಳಸಾಗದೆಯ್ದೆ ನಿರ್ಧನರಕ್ಕುಂ || ೧೪೦ ||

ಮಂತ್ರಿ ಮಿಥುನಕ್ಕೆ ಬರೆ ತಾಂ |
ಸಂತೋಷಂ ಕಿಡುಗು ಧರೆಗೆ ಪೆರ್ವಸದಿಂದಂ ||
ಸಂತತ ನೃಪವಿಗ್ರಹ ಮೆಂ |
ದೆಂತಿವು ಪಿರಿದಕ್ಕು ಜನಕೆ ಗುರುಚಾರದೊಳಂ || ೧೪೧ ||

1 ಯುಗಲಕ್ಕೆ. 2 ದಿರ್ಕುಂ. * ಈ ಭಾಗ ಮಾತ್ರ ವಚನದಲ್ಲಿದೆ.

ಕಂ|| ಕರ್ಕಾಟಕದೊಳ್ ಗುರುವಿರೆ |
ಕಾರ್ಕಡೆ ಮಱೆಯಕ್ಕು ಕಟುವೆಕರ್ಬುಂ ಫಲವುಂ ||
ತೋರ್ಕುಂ ಪಸುಕಱೆಗುಮೆಂಬಿನಿ |
ತರ್ಕಂ ಶಿಶುಜಾತರೆಯ್ದೆ ಪೆರ್ಚುಗು [1]ಸತತಂ || ೧೪೨ ||

ಸಿಂಗ(ಹ)ದೊಳೊಂದಿರೆ ಗುರು ಕಲ |
ಹಂಗಳ್ ಪಿರಿದಕ್ಕು ನೃಪತಿಗಳ್ ಜನಮಱುಗುಂ ||
ಪಿಂಗುಗು ವನಿತೆಯರುಂ (ಸು)ಧ |
ರಾಂಗನೆ ಕಡೆವೆಳಸುಮಲ್ಪವೃಷ್ಟಿಗಳಿಂದಂ || ೧೪೩ ||

ಗುರು ಕನ್ನೆಗೆ ಬಂದಿರೆ ತಾಂ |
ಕೆಱೆ ತೀವಿ ಸಮಸ್ತಧಾನ್ಯಮೆಲ್ಲ(ತ್ರ)ಂ ಬೆಳೆಗುಂ ||
ಕಱೆಗುಂ ಪಸುಗಳ್ ಧರ್ಮ |
ಕ್ಕೆಱೆಗಿರ್ಪರ್ ಮನುಜರೆಯ್ದೆ [2]ದುಂದುಮೆಗಾಲಂ || ೧೪೪ ||

ತೊಲೆಗೆ ಬೃಹಸ್ಪತಿ ಬರೆ ವಾಂ |
ಕಲಿ[3]ಯಕ್ಕುಂ ನರರೆ ಯುದ್ಧಸಮರಂಗದೊಳಂ ||
ಸಲೆ ಮಱೆಕೊಂಡನುರಾಧೆಗೆ |
ನೆಲನೆಲ್ಲಂ ಸುಪ್ರಸನ್ನಮಾಗಿಯೆ ಬೆಳೆಗುಂ || ೧೪೫ ||

ಗುರು ವೃಶ್ಚಿಕಕ್ಕೆ ಬರೆ ಕಾ |
ರಿರದಕ್ಕುಂ ಕಡೆಯುಮಲ್ಪಧಾನ್ಯಮದಕ್ಕುಂ ||
ಕೊರಗುವುದಲ್ಪದ ಮಱೆಯಿಂ |
ದೊರೆಕೊಳ್ಗುಂ ಜ್ಯೇಷ್ಠೆಮೂಲದೊಳ್ ಕಡೆ[4]ವಱೆಗಳ್ || ೧೪೬ ||

ಧನುಗೆವರೆ ದೇವಗುರು [5]ವಿಂ |
ಬಿನಲಿ ಕಿಳಂ ಪಱ್ತಿಯುಪ್ಪು[6]ಮುಂ ಘನಮಕ್ಕುಂ ||
ಘನವೃಷ್ಟಿಯಾಗಿ ಕರ್ಬುಂ |
ಘನವಕ್ಕುಂ ಸರ್ವಧಾನ್ಯಮಕ್ಕುಂ ಕಡೆಯೊಳ್ || ೧೪೭ ||

ಮಕರಕ್ಕೆ ಬೃಹಸ್ಪತಿ ಬರೆ |
ಸಕಲಾವನಿ ಕಾರುಕಡೆಯುಮಧಿಕಂ ಬೆಳೆಗುಂ ||
ಸಕಲಂ ಮಱೆ ಕೊಳ್ಗೆಂತೆನೆ |
ವಿಕಸಿತಫಲಮಕ್ಕುಮರ್ಘಮಕ್ಕುಂ ತುದಿಯೊಳ್ || ೧೪೮ ||

ಕೊಡನತ್ತ ಮಂತ್ರಿ ಬಂದಂ |
ದೊಡಗೂಡಲ್ ಬ್ರಹ್ಮಾಂಡಮೊಡೆದು ಕೆಱೆತೊಱೆ [7]ಕೊಳಮುಂ ||
ಬಿಡದೊಂದಿ ಕರ್ವು ನೆಲ್ಲುಂ (ಕೊಱೆ) |
ನಡುಬೆಳಸುಂ ಬೆಳೆಗುಮೆಯ್ದೆ ಧಾನ್ಯಸಮೂಹಂ || ೧೪೯ ||

---

1 ನಿರುತಂ. 2 ಜಟ್ಟವೆಡಂಗಾ. 3 ತನದಿಂ ವಿಭ್ರಮಂಗಳಂ ಮಾಱ್ಪವರಂ. 4 ವೆಳಸು(ಗು)ಂ. 5 ವಿಂಬಿನಿತುಮತಾಂ. 6 ಮಂದವುಮಕ್ಕುಂ. 7 ಫಲಮುಂ, ಪಲವುಂ—ಎಂದಿರಬಹುದು.

ಕಂ|| ಗುರು ಮಿಾನದೆಡೆಗೆ ಸಾರ್ದಂ |
ದಿರದಕ್ಕುಂ ಕಾರ ಬೆಳಸು ಪೆಂಡಿರ ಮನಸುಂ ||
ಕೊರಗುವುದಲ್ಪದ ಮುೞಿಯೊಳ್ |
ದೊರೆಕೊಳ್ಗುಂ ಕಡೆಯ ಬೆಳಸು ಸಿದ್ಧಾದೇಶಂ || ೧೫೦ ||

(ಇಂತು ಗುರುರಾಶಿಚಾರಫಲಂ—ನಕ್ಷತ್ರಚಾರಂ)

## ೧೪. ಬೃಹಸ್ಪತಿಯುದಯಾಸ್ತ ಫಲಂ

ವ|| ಇನ್ನು ಬೃಹಸ್ಪತಿಯ ವರ್ಷಫಲಮಂ ಪೇೞ್ವೆಂ—

ಕಂ|| ಗುರು ಕೃತ್ತಿಗೆಯೊಳ್ ರೋಹಿಣಿಯೆಂ |
ಬೆ[1]ರಡೃಕ್ಷದೊಳಮುದಯಮಾಗೆ ಕಾರ್ತಿಕಮಾಸ(ವರ್ಷ)ಂ ||
ಧರೆಯೊಳ್ ಪಸವಕ್ಕುಂ ಪುಸಿ |
ವರಶೂಲಂ ನುತವರಾಹಮತದೊಳ್ ಪೇೞ್ದಂ || ೧೫೧ ||

ಶಕಟಾನಲೋಪ ಜೀವ |
ಪ್ರಕರಂ ಕರಿಗಳ್ಗೆ ಪೊಲ್ಲ ಶಸ್ತ್ರಭಯಂ ಬಾ ||
ಧೆ ಕರಂ ಪುದುಗುಗು ತಾಂ ಕಾ |
ರ್ತಿಕಾಬ್ದದೊಳ್ ಪೀತಕುಸುಮಫಲಾಢ್ಯಂ || ೧೫೨ ||

ತ್ರಿವಿಧಿ|| ವರಚಂದ್ರಾರ್ದ್ರೆಯೊಳಂ ಗುರುವುದಯಿಸೆ (ಸೌಮ್ಯ)* |
ವರುಷಮುಂ ಮೞೆಗ[2]ಳಾಗದಿರದಿದ ಪುಸಿ |
ವರಶೂಲಮತಂ ತಪ್ಪುವುದೇ || ೧೫೩ ||

ಕಂ|| ಮಿಡಿಚೆ(ತೆ)ಯಿಲಿ(ಯೆಲಿ)ಯಿಂಚಿ ಮೃಗದಿಂ |
ಕುಡುಕುಗಳಂ ಕೊಳು(ಡು)ತುಮಿರ್ಪ ಖಗ(ಮಿಗ) ಸಂಕುಲದಿಂ ||
ಕಿಡುವುದು ಫಲಮುಂ ಪರಿಪುಂ |
ಪೊಡವಿಯೊಳಂ ಕೆಳೆಯರಾಷ್ಟ್ರರೊಳ್ ಪಗೆಗೊಳ್ವರ್ || ೧೫೪ ||

†ಅದಿತಿಗುರು ಸರ್ಪ ಋಕ್ಷೆಯೊ |
ಳುದಯಿಸೆ ಗುರುಪುಷ್ಯವರ್ಷಮಕ್ಕುಂ ಜನಕ ||
ಭ್ಯುದಯಕರಂ ನೃಪರುಂ ತ |
ಣ್ಣಿದರಪ್ಪರ್ ದ್ವಿಗುಣಮರ್ಘಮಕ್ಕುಂ ಜಗದೊಳ್ || ೧೫೫ ||

ಗುರು ಮಘೆ ಪೂರ್ವೆಯೊಳುದಯಿಸೆ |
ಧರೆಯೊಳ್ ಮಘಾಬ್ದದಲ್ಲಿ ಪಿತೃಪೂಜಾತ ||
ತ್ಪರರಪ್ಪರಿಳೆಯೊಳೆಲ್ಲಂ |
ಪಿರಿದುಂ ಸಂಪೂರ್ಣಮುಂಡು ತಣಿಗುಂ ಭೂತಂ || ೧೫೬ ||

1 ರಡಜುಗಳಂ. 2 ಳಾಗದಿರವೆಂದು ಪುಸಿ.

*ಮಾರ್ಗಶಿರಮಾಸ - ಎಂದಿರಬೇಕು. †ಪುನರ್ವಸುನಕ್ಷತ್ರವಿಲ್ಲ.

ಕಂ|| ಗುರುವುದಯಿಸೆ ನೆಗೞ್ದುತ್ತರೆ |
ವರಹಸ್ತಂ ಫಾಲ್ಗು(ನ)ಮಾಸದಾ ವರುಷದೊಳಂ ||
ಧರೆಗೆ ಮೞೆ ಬೆಳಸುಮಕ್ಕುಂ |
[1]ಅರಸರ ತಸ್ಕರರ ಬಾಧೆ ಜಗದೊಳಗೆಲ್ಲಂ || ೧೫೭ ||

ಸ್ವಾಗತಂ|| ನಂದ ಚಿತ್ರೆ ಪವನರ್ಕ್ಷದೊಳಿರ್ದಾ |
ನಂದದಿಂ[2]ದುದಯಮಾದೊಡೆ ಚೈತ್ರ ||
ಕ್ಕಂದು ಬಂದು ಮೞೆ ಮಧ್ಯಮಮರ್ಘಂ |
ಕುಂದುಗುಂ ಬೆಳಸು[3]ಮಲ್ಪಮೆ ಧಾನ್ಯಂ || ೧೫೮ ||

ತ್ರಿವಿಧಿ|| [4]ಯಜನಧರ್ಮಂಗಳಂ ಭೂಭುಜರ್ (ಕಾದಿ) ಕಿಡಿಸುವರ್ |
ಗುಜುಗುಜುಗೊಳುತ್ತಿಹರ್ ಪ್ರಜೆಯೆಂಬುದ(ನಾ)
ಸುಜನ ಜನಸ್ತುತ್ಯನಱಿಪಿದಂ || ೧೫೯ ||

ಕಂ|| ಇಂದ್ರಾಗ್ನಿಮಿತ್ರ ಋಕ್ಷೆಯೊ |
ಳಿಂದ್ರೇಜ್ಯ(ಜ್ಯ)ನುಮುದಯಮಾಗೆ ವೈಶಾಖಾ(ಕಾ)ಬ್ದಂ ||
ನಂದಾ ಪ್ರಜೆಗಮತಿಶಯಾ |
ನಂದಕರಂ ದ್ವಿಜರ್ಗೆ ಸಂತತಂ ಧರೆ ಬೆಳೆಗುಂ (ಕೊಳ್ಗಂ) || ೧೬೦ ||

ಜ್ಯೇಷ್ಠೆಯೊಳಂ ಮೂಲದೊಳಂ |
ಶ್ರೇಷ್ಠಂ ಗುರುವುದಯಮಾಗೆ ಜ್ಯೇಷ್ಠಾಬ್ದಂ ತಾಂ ||
ಸೃಷ್ಟಿಗೆ ನೃಪರ್ಗೆ(ಗಂ)ಳ್ ಬೆಳಸುಂ |
ಕಷ್ಟಂ ಕೊಱೆ ಬೆಳೆಗುಮುೞಿದ ಧಾನ್ಯಂ ಕಿಡುಗುಂ || ೧೬೧ ||

ಎರಡಾಷಾಢದೊಳುದಯಿಸೆ |
ಗುರುವಾಷಾಡಾಬ್ದದಲ್ಲಿ ಮೞೆಯಿಲ್ಲೆಂತುಂ |
ಅರಸಿಂಗೆ ಪುರಿಗೆ ಮಧ್ಯಮು |
ಮುದದಿಂದಾಸಸಿಗೆ(ಗ) ಮೊಳ್ಪಿತೆಂದಂ ಬಟ್ಟಂ || ೧೬೨ ||

ಶ್ರವಣಂ ಧನಿಷ್ಠೆ ಶತಭಿಷೆ |
ಯಿಮಱೊಳ್ ಗುರುವುದಯಮಾಗೆ [5]ಶ್ರಾವಣಮುಬ್ದಂ ||
[6]ಭುವನದೆ ಬೆಳಸಕ್ಕುಂ ಕ್ಷು |
ದ್ರವಿಗತಿಶಯದಿಂ ಭಕ್ತಬಾಧೆಯುಕ್ಕುಂ ನಿರುತಂ || ೧೬೩ ||

ಎರಡುಂ ಭಾದ್ರ(ಪದ)ಂ ರೇವತಿ |
(ಯೊಳ್) ಸುರಗುರುವುದಯಿಸಲ್ಕೆ ಭಾದ್ರಪದಾಬ್ದಂ ||
ಧರೆಗೆಯ್ದೆ ಬೆಳಸುಂ ಪಿರಿದುಂ |
ಪರಿಭವಿಸು ಬಲಿಯು ರಾಜ್ಯದಿರವಂ ಪೋಲ್ಕುಂ || ೧೬೪ ||

1 ಅರಸುಂ. 2 ದುವೆ(ದೆಯು) ಮಾದೊಡೆ ಚೈತ್ರಬದಂದು. 3 ಮೆಂದಿರು ಧಾನ್ಯಂ, ಲ್ಪಮು ಧಾನ್ಯಂ. 4 ಯಜನಾದಿ ಧರ್ಮನುರ ಭೂ. 5 ಶ್ರವಣಾಬ್ದಂ ತಾಂ. 6 ಭುವನದೊಳು ಬೆಳಸು ಪಿರಿದುಂ ಕ್ಷದ್ರಾವಿಧ ಗತಿ ಭಕ್ತ.

ಮತ್ತಂ—

ಕಂ|| ಮತ್ತಂ ಕಾರ್ತಿಕಸುಂ ಕಡೆ |
ಬಿತ್ತಿದೊಡಂ ಬೆಳೆಯದಿರ್ಕು ದೇಶಕೆ ಪಿರಿದಾ ||
ಪತ್ತಕ್ಕುಂ ಕುಂಭದ್ವಯ |
ಕತ್ತಾಮರಣಂ ಪ್ರಭೂತಮಾವೊಂದೆಸೆಯೊಳ್ || ೧೬೫ ||

ನೆಗಲ್ದಶ್ವಿನಿ ಭರಣಿಯೊಳಿಂದ್ರ |
ನ ಗುರುವುದಯಿಸಿದೊಡಾಶ್ವಯುಜಮಾಸಾಬ್ದಂ ||
ಜಗಕಂ ಮಂಟಿಯು ಸುಭಿಕ್ಷಂ |
[1]ಸೊಗಸಿರ್ಕುಂ ವೈರಿ ನೃಪರ ಭಯವಿನಿಸಕ್ಕುಂ || ೧೬೬ ||

(ಇಂತು ಗುರುವಿನುದಯಾಸ್ತ ಮಾಸವರ್ಷ ಫಲಂ)

೧೯. ಬೃಹಸ್ಪತಿಯ (ಗುರುವಿನ) ವರ್ಷ ಫಲಂ

ವ|| ಇನ್ನು ಬೃಹಸ್ಪತಿಯ ವರ್ಷಫಲಮಂ ಪೇೞ್ವೆಂ—

ಕಂ|| ಗುರುವೆರಡು ರಿಕ್ಷೆಯೊಳ್ ವ |
ತ್ಸರವಿರ್ದೊಡೆ ಪೊಳ್ತೆರಡುವರೆ ಮಧ್ಯಮ ಮೀ ||
ಶ್ವರನಯನ ಋಕ್ಷದಿ ವರ್ಷಂ |
ಬರಲೆಯ್ದೆ ಕನಿಷ್ಠಮೆಂದ ಸುಕವಿನಿಧಾನಂ || ೧೬೭ ||

ಗುರುಶಕಟಾನಲ ಋಕ್ಷಂ |
ಶರೀರಮಾಷಾಢಯುಗ್ಮಮುಂ ಪೊರ್ಕುೞ್ ಭೀ ||
ಕರ ಸರ್ಪರ್ಕ್ಷಂ ಹೃದಯಂ |
ಪರಮಾರ್ಥಂ ನೇತ್ರಮಾಗೆ ಋಕ್ಷಂ ನಿರುತಂ || ೧೬೮ ||

ಮ|| ಒಡಲೊಳ್ ಪೊರ್ಕುೞೊಳಂತೆಯಾಹೃದಯದೊಳ್ ಪಾಪಗ್ರಹಂ ಕೂಡಿಯಿ |
ರ್ದೊಡೆ ಸಂದಗ್ನಿಭಯಂ ಮಹಾಪವನಕ್ಷುತ್ಪೀಡಾಭಯಂ ಕಾಡುಗುಂ ||
ಕಿಡುಗುಂ ತಾಂ ಸಸಿಗಳ್ ಸಮೂಲಫಲ ನಿರ್ಮೂಲತ್ವಮೆಲ್ಲಂದದಿಂ |
ಕಡುದುಃಖಂ ಕಡೆಗಕ್ಕುಮೆಂದನಭಯಂ ಸಮ್ಯಕ್ತ್ವರತ್ನಾಕರಂ || ೧೬೯ ||

ಕಂ|| ಉತ್ತರ ಮಧ್ಯಮ ದಕ್ಷಿಣ |
ದತ್ತಣ ವೀಥಿಯೊಳಮಿಂದ್ರ ಗುರು ನಡೆಯಲ್ ಸಂ ||
ದುತ್ತಮ ಮಧ್ಯ ಕನಿಷ್ಠಾ (ಷ್ಠತೆ) |
ವೃತ್ತಿಯೆ ಪ್ರಜೆಗಕ್ಕುಮಖಿಳವಸುಧಾತಳದೊಳ್ || ೧೭೦ ||

ಗುರುವೊಂದು ರಾಶಿಯೊಳ್ ಪ |
ನ್ನೆರಡುಂ ತಿಂಗಳೊಳಮಿರ್ದೊಡಂತದು ಸಂವ ||
ತ್ಸರಮೆಂಬರಗ್ನಿದೇವತೆ |
ವರುಷಂ ಸಾಮಾನ್ಯಮಕ್ಕು ಮರ್ಹದಾ ಸಾ || ೧೭೧ ||

1 ಗೆಯಕ್ಕುಂ ಭಯದಿ ಪಿರಿದು ಮಂಡಲಕೆಲ್ಲಂ|| ಳಜ೩ ||

ಕಂ|| ಪದಿಮೂಱು ತಿಂಗಳಂ ಪಿಂ |
ಗದೆ ಗುರು ನೆಲಸಿದೊಡೆ [1]ದೈವಮಾದಿತ್ಯಂ ನಾ ||
ಮದೆ ಪರಿವತ್ಸರಮುಂ ಸಂ |
ಪದಮಕ್ಕುಂ ಪ್ರಜೆಗೆ ಶಾಂತಮೆಂದಂ ಬಿಟ್ಟಂ || ೧೭೨ ||

ಪನ್ನೊಂದು ತಿಂಗಳಿಂ ಗುರು |
ಸನ್ನುತದಿಂದೊಂದು ರಾಸಿಯೊಳ್ ನೆಲಸಿರೆಯಂ ||
ದುನ್ನತ ಗುರುವಿನ ಪರ್ವಂ |
ಬಿನ್ನಣಮೇಂ ಪ್ರಜೆಗೆ ಸುಖಮನಿಷ್ಟಮ[2]ನೀಗುಂ || ೧೭೩ ||

[3]ಇರೆ ಪತ್ತುತಿಂಗಳಿಂ ಸುರ |
ಗುರುವಿದು ವತ್ಸರದ ನಾಮಮಕ್ಕು ಮದಂ ||
ತಿರಲೆಯ್ದಿ ಯಿಾಶ್ವರಂ ಕೇಳ್ |
ವರುಷಂ ಭೂತಳಕೆ ಮಧ್ಯಮರ್ಹದ್ದಾಸಾ || ೧೭೪ ||

ಗುರುವೀರೇೞುಂ ಮಾಸಮು |
ಮಿರೆ ಪ್ರಾಜಾಪತ್ಯಂ [4]ದೈವಮದಱ ಪೆಸರಂ ||
ತಿರಲನುವತ್ಸದ ಕಡೆವಡೆ |
ಪರಮಾರ್ಥಂ ಧರೆಗೆ ಬಿಟ್ಟನಾಮತದಿಂದಂ || ೧೭೫ ||*

ಮ|| †..........ಗ್ರಹದೊಳ್ ಶುಕ್ರಾರ್ಕಜರ್ ಮೇಣ್ ಸುಖಾ |
ಷ್ಟಮದೊಳ್ ಮಂದಜನಸ್ತದೊಳ್.......................... ||
ಕ್ರಮದೊಳ್ ಕೂಡಿರೆ ತಾಂ ಬಲಾಢ್ಯನೆನೆ ಚಂದ್ರಂ ಶುಕ್ಲಪಕ್ಷಂಗಳೊಳ್ |
ಬುವಿ(ಭೂಮಿ)ಗೆಲ್ಲಂ ಮುಱಿಯಕ್ಕುಮೆಂದಱಿಪಿದಂ ಸವ್ಯಕ್ತ್ವರತ್ನಾಕರಂ ||೧೭೬||

1 ದಯ. 2 ನಿಷ್ಟಮುಮಕ್ಕುಂ. 3 ಇಪ್ಪತ್ತು ತಿಂಗಳೊಳ್ ಗುರುವಿರೆ ವತ್ಸರದ ನಾಮಕಮದಕ್ಕುಂ ತೀರೆಯ್ದಿ ಯಿಾಶ್ವರಂ ಕೇಳ್ ವರುಷಂ ಭೂತಳಕೆ ಮಧ್ಯ ಮರ್ಹದ್ದಾಸಾ || ೬ || 4 ದೇಯ(ದೆಯ್ವ) ವರುಷದ ಪೆಸರುಂ ತಿರಲನುವತ್ಸರ ವಡೆವಡೆ......ಬಿಟ್ಟನಮತದಿಂದಂ.

*ಇಲ್ಲಿ ಟೀಕೆ ಒಂದು ಪ್ರತಿಯಲ್ಲಿದೆ— ಬೃಹಸ್ಪತಿ ಪನ್ನೊಂದು ತಿಂಗಳೊಂದು ರಾಶಿಯೊಳಿರಲನುವತ್ಸರ ಮೆಂಬುದು, ಪದಿಮೂರು ತಿಂಗಳಿರೆ ಪರಿವತ್ಸರಮೆಂಬುದು, ಪನ್ನೊಂದು ತಿಂಗಳಿರೆ (ಯಿರಾದಿ) ಗುರುವರ್ಷ ಮೆಂಬುದು, ಪದಿನಾಲ್ಕು(ಜ.) ತಿಂಗಳಿರೆ (ಅನುವತ್ಸರ) ಪ್ರಾಜಾಪತ್ಯವತ್ಸರಮೆಂಬುದು, ಪತ್ತುತಿಂಗಳಿದ್ದರೆ ವತ್ಸರಮೆಂಬುದು.

ಆರಾ ಪ್ರತಿಯಲ್ಲಿ ಈ ಪದ್ಯದ ಕೊನೆಯಲ್ಲಿ— || ೭ || – ಎಂದು ಪದ್ಯ ಸಂಖ್ಯೆ ಹಾಕಿ—ಇದು ಬೃಹಸ್ಪತಿ ವರ್ಷದ ಫಲಂ ಸಮಾಪ್ತಂ – ಅಂತು ರಗಳೆ ಹೊರತಾಗಿ, ೭೦೧ ರೆಗಳೆ ಸಹಿತ ಗ್ರಂಥಲೆಕ್ಕ ೧೬೨೫ಕ್ಕಂ ಬಿಟ್ಟ ಸಮಾಪ್ತಂ ಮಂಗಳ ಮಹಾಶ್ರೀ – ಎಂದು ಪೂರ್ಣವಾಗಿದೆ.

ಆರಾ ಪ್ರತಿಯ ಓಲೆಯ ಪ್ರತಿಯಂತೆ 8 (8×2 ಪಕ್ಕಕ್ಕೆ=16) ಪಂಕ್ತಿ, ಪಙ್ಕ್ತಿ ಒಂದಕ್ಕೆ 64 ಅಕ್ಷರ× 65 ಪತ್ರ–2080 ಗ್ರಂಥ.

† ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರವಿದೆ, ಅಶುದ್ಧ ಮತ್ತು ಅಪೂರ್ಣವಾಗಿದೆ.

ಕಂ|| ಶನಿ ರಾಹು ಕೇತುಕುಜರಿಂ |
ಘನಮೆನಿಸಿದ ಕಲಹಮಕ್ಕು ಮಿನಗುರುಶಶಿಯಿಂ ||
ದಿನಿತಾನುಂ ಸಂಖೆ(ಶಂಕೆ)ಯಿಲ್ಲದೆ ಸಸಿ |
ತನಯನ ಭೃ(ಬ್ರು)ಗುವಾಗಿ ನೋಡೆ(ಡಿ) ನಿರ್ಭಯಮಕ್ಕುಂ || ೧೭೭ ||*

(ಇಂತು ಗುರುಸಂವತ್ಸರ ಫಲಂ)

ಇಂತು ನಕ್ಷತ್ರಗ್ರಹಸ್ವರೂಪಾಧ್ಯಾಯಂ ದ್ವಾದಶಂ ೨ ಸಮಾಪ್ತಂ.

ಅಟ್ಟಿ ಮತಂ ಸಮಾಪ್ತ

*ಮೈಸೂರು ಓರಿಯೆಂಟಲ್ ಲೈಬ್ರರಿಯ ಪ್ರತಿಯಲ್ಲಿ-ಆದಿಯಿಂದ ಪದ್ಯರಗಳಿಗಳ ಸಂಖ್ಯೆ ೬೩೬-ಎಂದಿದೆ.

## ಪರಿಶಿಷ್ಟ ೧(*a*)

### ಯಂಗಳಲ್ಲಿ ಮತ್ತು ಟ್ಟನಲ್ಲಿ ವೃತ್ತಕಂದಗಳ ತಿ ಸಂ ಗಳ ಪಟ್ಟಿಕೆ

| ವೃತ್ತಗಳ ಹೆಸರು | ಅಧ್ಯಾಯಗಳು | | | | | | | | | | | | ಒಟ್ಟು |
|---|---|---|---|---|---|---|---|---|---|---|---|---|---|
| | ಪ್ರಥ. | ದ್ವಿತೀ. | ತೃತೀ. | ಚತು. | ಪಂಚ. | ಷಷ್ಠ. | ಸಪ್ತ. | ಅಷ್ಟ. | ನವ. | ದಶ. | ಏಕಾ. | ದ್ವಾದ. | ವೃ. ಸಂಖ್ಯೆ |
| 1. ಕಂದಂ | 41 | ... | 2 | 12 | 19 | 28 | 107 | 158 | 30 | ... | 28 | 142 | 567 |
| 2. ಚಂಪಕಂ | 3 | ... | .... | 5 | 4 | 10 | 16 | 10 | 11 | ... | 10 | 11 | 80 |
| 3. ಮತ್ತೇಭಂ | 1 | ... | .... | 2 | ... | 5 | 12 | 5 | 1 | ... | 4 | 10 | 40 |
| 4. ಉತ್ಪಲಂ | 1 | ... | .... | 4 | ... | 13 | 8 | 7 | 6 | 4 | 10 | 4 | 57 |
| 5. ಸ್ರಗ್ಧರೆ | ... | ... | .... | .... | ... | ... | ... | ... | ... | ... | .... | 1 | 1 |
| 6. ರಗಳೆ | ... | ... | 3 | .... | ... | ... | ... | ... | ... | ... | .... | .... | 3 |
| 7. ಮಂಗಳಂ | ... | 2 | .... | .... | ... | 1 | ... | ... | ... | ... | .... | .... | 3 |
| 8. ಶಾರ್ದೂಲಂ | ... | ... | .... | 1 | ... | ... | ... | 3 | ... | 1 | 1 | 1 | 7 |
| 9. ಪಿರಿಯಕ್ಕರಂ | ... | ... | .... | 2 | ... | ... | ... | 4 | ... | ... | 13 | 3 | 22 |
| 10. ತ್ರಿವಿಧಿ | ... | ... | .... | .... | 1 | 2 | 7 | 16 | ... | ... | .... | 2 | 28 |
| 11. ಮಣಿವಿಭೂಷಣಂ | ... | ... | .... | .... | ... | 1 | ... | ... | ... | ... | .... | .... | 1 |
| 12. ಮಹಾಸ್ರಗ್ಧರೆ | ... | ... | .... | .... | ... | 1 | ... | ... | ... | ... | 1 | 1 | 3 |
| 13. ತೋಟಕಂ | ... | ... | .... | .... | ... | ... | 1 | ... | ... | ... | .... | .... | 1 |
| 14. ಮಲ್ಲಿಕಾಮಾಲೆ | ... | ... | .... | .... | ... | ... | 1 | ... | ... | ... | .... | 1 | 2 |
| 15. ಸ್ವಾಗತಂ | ... | ... | .... | .... | ... | ... | 1 | ... | ... | ... | .... | 1 | 2 |
| 16. ಷಡ್ಪದಿ (ಪ್ರಾಕೃತ) | ... | ... | .... | .... | ... | ... | ... | 1 | ... | ... | .... | .... | 1 |
| ಒಟ್ಟು. ಅಧ್ಯಾ. ವೃ. ಸಂಖ್ಯೆ.... | 46 | 2 | 5 | 26 | 24 | 61 | 153 | 204 | 48 | 5 | 67 | 177 | 818 |

## ಪರಿಶಿಷ್ಟ ೧ (b)

### (೧) ರಾಹುಚಕ್ರಂ




(ಪುಟ 87 ರಲ್ಲಿ ವಿವರಿಸಿರುವುದು)

## (೨) ನಕ್ಷತ್ರ ಚಕ್ರಂ

ರೋ ಮೃ ಆ
ಕೃ ಪುನ
ಭ ಪುಷ್ಯ
ಅ ಆಶ್ಲೇ

ಹ ಚಿ ಸ್ವಾ
ಉ ವಿ
ಪು ಅನು
ಮ ಜ್ಯೇ

ಶ್ರ ಧ ಶತ
ಉ-ಷಾ ಪೂ-ಭಾ
ಪೂ-ಷಾ ಉ-ಭಾ
ಮೂ ರೇ

(ಪುಟ 32ರ ಟಿಪ್ಪಣಿಯಲ್ಲಿ ವಿವರಿಸಿರುವುದು)

# ಪರಿಶಿಷ್ಟ ೨

## ಗ್ರಂಥಸ್ಥ ವೃತ್ತಕಂದಗಳ ಅಕಾರಾದ್ಯಾದ್ಯಕ್ಷರಾನುಕ್ರಮಣಿಕೆ

---

ಪ

ಹ

# ಪರಿಶಿಷ್ಟ ೩

## (ಪ್ರಭವಾದಿ ಷಷ್ಟಿಸಂವತ್ಸರ ಫಲಂ)

ಶ್ರೀಪತಿ ಪಶುಪತಿ ವಿದ್ಯಾ।
ಶ್ರೀಪತಿ ರತಿಪತಿ ಗಣಾಧಿಪತಿ ದಿನ(ವಸ)ಪತಿಯೆಂ ॥
ಬೀ ಪುರುಷರೀಗೆ ನಮಗಾ।
ಶ್ರೀಪದಮನಾತ್ಮಗುಣಸಂಪದಮಂ ॥ ೧ ॥*

ಪ್ರಭವದೊಳೆ ಬೆಳಸು ಮಧ್ಯಮ।
ವಿಭವದಿ ಮಟೆಗಾಲಮಲ್ಪಮುಂಟು ಕೊರೆ(ಱೆ)ಯುಂ ॥
ಶುಭಮೆನೆ ಬೆಳೆಗುಂ(ಯು) ಜನಕತಿ।
ಶುಭಮಂ ನೆಱೆ ಮಾಟ್ಕುಮಿನಿತು ನಯಮಂ ಶೋರ್ಕುಂ ॥ ೨ ॥

ಪಸು ಕಱೆಗು ಮಟೆಗಳುನ್ನತ।
ಪಸರಿಸಿ ಕಾರ್ಕಡೆಯು ಬೆಳೆಗುಮೆಂದು(ಲ್ಲ)ಜನ(ಗ)ಕ್ಕಂ ॥
ದೊಸಗೆ ಮನೆಮನೆಯೊಳೆಲ್ಲರಿ।
ಗೆಸೆದಿರೆ ವಿಭವಾಬ್ಧ ಮದು ವಸಂತಂ ಸಂತಂ ॥ ೩ ॥

ಪಱ್ತಿ (ಹತ್ತಿ) ಯುನುಪ್ಪಂ ಸಂಗ್ರಹಿ।
ಸಱ್ತಿ(ರ್ಥಿ)ಯೊಳವು ಬೆಳೆಯುವುಱಿದ ಧಾನ್ಯಂ ಬೆಳೆಗುಂ ॥
ಕೀರ್ತಿನೆ ಪಸು ಕಱೆಗುಂ ಜಗ।
ದರ್ಥನೆ ಶುಭಮೆನಿಸೆ ಶುಕ್ಲವರ್ಷಂ ಹರ್ಷಂ ॥ ೪ ॥

ಕಱವೆ ನೆಲ್ಕುರ್ವುವರ್ಿಂ ಬೆಳಸಾಗವು।
ಮಱಿಯ ಉಱಿದುವೆಲ್ಲಂ ಬೆ[ಳೆಗುಂ ಭೂಮಿ]ಪ ॥
ರಱಿಗುಂ ಪ್ರಜೆಗಂ।
ಪಳೆಮಿಗಿಲ್ಲದಱಿಂ ಪ್ರಮಾಥಿವರುಷಂ ಪಡೆಗುಂ ॥ ೫ ॥

........ದಿಳೆ ಸಂಪದಮಂ ತಾ।
ಳ್ದಿರೆ ಮನುಷ್ಯಪಶುಮೃಗಜೀವಾಭ್ಯುದಯಕರಂ ॥
ಕರಮೆನೆ ಪೊ........................।
........ ಹರುಷದೊಳ್ ಪ್ರಜೋತ್ಪತ್ತಿವರುಷಂ? ॥ ೬ ॥

---

*ಇಲ್ಲಿಂದ (೮೩೮—೮೪೯) ಎಂಬ ಸಂಖ್ಯೆಯುಳ್ಳ ಈ ೧೨ ಪದ್ಯಗಳು ಮೈಸೂರ್ ಸರ್ಕಾರದ ಲೈಬ್ರರಿಯ ಪ್ರತಿಯ ಕೊನೆಯ ಭಾಗದಲ್ಲಿದೆ. ಈ ಒಂದನೆಯ ಪದ್ಯಕ್ಕೆ ಹಿಂದಣ ಗ್ರಂಥಸಂಖ್ಯೆಯೊಡನೆ ನಿರಂತರವಾಗಿ ೮೩೮ಎಂಬ ಸಂಖ್ಯೆಯನ್ನು ಕೊಟ್ಟಿದೆ. ಗ್ರಂಥವು ಅಸಮಾಪ್ತವಾಗಿದೆ.

ಷನ್ನೆರಡು ಧಾನ್ಯಮುಂ ಬೆಳೆ |
ದೆನ್ನರು(ಉ)ವೆಂದವರು ಗೊಲುಕರದೆಡೆ ಬೆಳೆಯಿಂ ||
ದನ್ನೆ(ನ್ನಾಕ್ಕೆ)ಯುಮುಕ್ಕು ಮಾಗಿರೆ |
ಡು(ಯು)ನ್ನತ ಸಂಘಾತಮೆನಿಪುದಘಟಿತಘಟಿತಂ || ೭ ||

ಮಡಗೆನಿತು ಧಾನ್ಯವನಿತಂ |
ಯೆಡೆಯುಡುಗದೆ ಬೆಳಸುಮರ್ಘಮುಂ ಮುಱಿಯುಂ ಕಾ ||
ರ್ಕಡೆ ಬೆಳೆಗುಂ ಪ್ರಜೆಗೆ ಭಯಂ |
ನಡುಕಂ ಶ್ರೀಮುಖದ ಪೂಱದಹಿಮುಖ ಸದೃಶಂ || ೮ ||

ಕುಜನತಿವಕ್ರಿಸೆ ಮುಱಿಯಿಂ |
ಸೃಜಿಯಿಸಿದಂ ಧೂಮಕೇತುವುದಯಿಸೆ ಬೆಳೆಸಿ ||
ಲ್ಲಜೆಯುಂ ರುಜೆಯಿಂ ನವೆಗುಂ |
ಪ್ರಜೆಯೆಂಬಱ ಭಾವವರ್ಷ ಮಘಕುಳವರ್ಷಂ || ೯ ||

ಯುವವೆಂಬ ವರುಷದೊಳ್ ಸಂ |
ಭವಿಕುಂ ಜನಕೆಲ್ಲ ಕೊರ್ವ್ವ(ಬ್ಬ್ಜ) ನೃಪರಿಂ ಪಸವುಂ ||
ತವಿಕುಂ ರುಜಾಗ್ನಿಭಯಂ ಸಂ |
ಭವಿಕುಂ ಮುಱಿಯಲ್ಪಮುದಱ [ಬೆಳ] ಸುಂ ಸ್ವಲ್ಪಂ || ೧೦ ||

ಧಾತುವಿನೊಳಗ್ನಿ ಗರ್ಭನಿ |
ಪಾತ ಮಹಾಜ್ವರ ಭಯಂಗ[ಳಿಲ್ಲಂ] ಬೆಳಸುಂ ||
ಭೂತಳದೊಳರ್ಘಮಿಲ್ಲಂ |
ದೀತೆರದಿಂ ಪೇಳ್ದ ಬಲ್ಲನುರ್ವರೆಗೆಲ್ಲಂ || ೧೧ ||

ಈಶ್ವರದೊ...................... |
........ರೆನಿಪರ್ ಸಮಸ್ತಧಾನ್ಯಂ ಬೆಳೆಗುಂ ||
ದೇಶದೊಳರ್ಘಮುಮಿಲ್ಲಂ |
ಲೇಸೆನಿಸಿ ಬೆಳೆ ..................... || ೧೨ ||

* * * * * *

...........................ದೆಯೊ |
ಳಿಸೆ ಮೀಕನ್ನಡಿಗರಿಱವು ಸಾವರ್ ತಮ್ಮೊಳ್ ||
ವಸುಮತಿಯೊಳ್ ವಿಶ್ವಾವಸು |
ವೆಸೆದಿರೆ ಬಱನಮಸೆಯುಗ್ಗೇ ಮಾರಿಯೆ ಘೋರಂ || ೩೯ ||*

*ಆರಾ ಪ್ರತಿಯಲ್ಲಿ ಇಲ್ಲಿಂದ ಗ್ರಂಥವು ಆರಂಭವಾಗಿದೆ. ಆದಿಯ ೩೨ ಕಂದಗಳಿಲ್ಲ. ಈ ಕಂದಗಳಲ್ಲಿ ೩೦ ವರುಷಗಳ ಫಲದಲ್ಲಿ ಇಲ್ಲಿಂದ ಹಿಂದಣ ೨೮ ವರುಷಗಳ ಫಲವನ್ನು ಹೇಳುವ ಕಂದಗಳೂ ಗ್ರಂಥಾದಿಯ ಮಂಗಳಪದ್ಯಾದಿಗಳೂ ಇದ್ದಿರಬಹುದು.

ಪರಿ(ರ)ಭವದೊಳ್ ಮಱೆ ಕಱೆಗುಂ |
ಧರೆ ಬೆಳೆಗುಂ ಸುಖಮನೆಯ್ದುಗುಂ ನರರೆಲ್ಲಂ ||
ಪರಿಭವದೈತ್ಯ(ರ್ಗ)ೞಗಕ್ಕುಂ |
ವರ ಜಿನಮಾರ್ಗದೊಳೆ ಪೇೞ್ದ ಐಟ್ಟಬೆಡಂಗಂ || ೪೦ ||

ಅಱಗುಂ ಮೂಱು ಪೊೞಲ್ಗಳು |
ಮಱವೆಳಸಕ್ಕುಂ ಬಱನು [1]ವಿೞ್ದಿಯುಂ ಪಿರಿದಕ್ಕುಂ ||
ಅೞಲಕ್ಕು ಪ್ರಜೆಗೆ ನಿರುತಂ |
ಮಱೆ ಪಿರಿದಿಲ್ಲ ಪ್ಲವಂಗದೊಳ್ ರುಜೆ [ಪಿರಿದು]ಂ || ೪೧ ||

ಕೀಳ ಮೞೆ ಕಱೆಗು ಕಡೆವರ |
ಶಾಳಿಪ್ರಮುಖಂಗಳೆಯ್ದೆ ಬೆಳೆಗುಂ ಧಾನ್ಯಂ ||
ಕೀಳಕ ಸಂವತ್ಸರದೊಳ್ |
ಪಾಳಿಸುವರ್ ನ್ಯಾಯದಿಂದೆ ಭೂಪರ್ ಧರೆಯಂ || ೪೨ ||

ಕಾರುಂ ಕಡೆ[ಯುಂ ಬೆ]ಳೆಗುಂ |
ಧಾರಿಣಿಯೊಳ್ [2]ನೋ(ನಾ)ಡೆ ಜನಕೆ ಪರಮೋತ್ಸಾಹಂ ||
ಆರಯ್ದು ನೋಡೆ ಯರ್ಘಮು |
ಬಾರಿಪರಾರ್ ಸೌಮ್ಯಮೆಂಬ ಸಂವತ್ಸರದೊಳ್ || ೪೩ ||

ಪೆಸಱುಂ ಜೋಳಮು ………… |
ಮಸದಳಮೆನೆ ಬೆಳೆಗು ಮುೞಿದ ಬೆಳಸಿನಿಸಲ್ಪಂ ||
ವಸುಧೆಯೊಳಂ ಇ(ಯಿ)ದನಱವುದು |
ಕುಶ(ಸ)ಲರ್ ತಾವೊಪ್ಪುತಿರ್ಪ ಸಾಧಾರಣದೊಳ್ || ೪೪ ||

ಉನ್ನತ ಬೆಳಸಾಗು [ವುದಿನಿ] |
ಸನ್ನಂ ಪುಟ್ಟಗೆಯುಮರ್ಘ ಕಿಱಕಿಱದಕ್ಕುಂ ||
ಸನ್ನುತಮಾಗದು ಗೋಕುಲ |
ವಿನ್ನಿದಕಿನಱ [ನೀಂ] ವಿರೋಧಿಕೃತು (ಸಂ)ವತ್ಸರದೊಳ್ || ೪೫ ||

ಪರಿಧಾವಿಯೆಂಬುದದಱೊಳ್ |
ಪಿರಿದುಂ …………ಸಂಪತ್ತಿ ಲವಣಂ ತೈಲಂ ||
ಪಿರಿದಾಗೆ ಕಱೆಗು ಗೋಕುಲ |
ನಿರುತಂ ಪರಮಾರ್ಥ ಬಾಧೆ ಬೆಂಕೆ(ಕಿ)ಯೊಳಕ್ಕುಂ || ೪೬ ||

ತಪ್ಪದೆ ಬೆಳೆವುದು ಬೆಳಸಿನಿ |
ಸಪ್ಪುದು ಮೞೆ ಕುಸಿಗುಮರ್ಘ [ಕಾಂ] ಬೆಳಸಕ್ಕುಂ ||
ಮಪ್ಪ(ಲ್ಪ)? ಪಶು ಸೀ(ಶೀ)ರೆ ಪೊನ್ನಿ(ಗೆ)ಮೆ |
ತಪ್ಪದು [4]ಕೀಳ್ ಪ್ರಮಾಧಿ(ಜಿ)ಜಿತ ಸಂವತ್ಸರದೊಳ್ || ೪೭ ||

---

1 ವೃದ್ಧಿಯುಂ. 2 ಜನಕ್ಕೆ ನಾಡೆ ಪರಮೋತ್ಸಹಮುಂ. 3 ನಯವಿನಿರೋಧಿ. 4 ಕೀಳಪ್ರಮಾದೀಜ ಸಂವ, ಕೀಳ ಪ್ರಮಾದಿ ಜಿತಸಂವ.

ಬೆಳೆವುದು ಕರ್ಪೂರಂ ಕಱವೆಯುಂ |
ಬೆಳುವೊಲ ನೆಲ್ಲುೞಿದ ಧಾನ್ಯವೞೆವೆಳಸಕ್ಕುಂ ||
ಫಳವಿಂದ ನಱಿಗೆ [ಧರಾ]ವುಂ |
ಡಳದೊಳಗಾನಂದವೆಂಬ ಸಂವತ್ಸರದೊಳ್ || ೪೮ ||

ಬೆಳೆವುದು ಧರಾತಳಂ ಕಡೆ |
ಮೞೆ ಕಱೆವುದು ಪಸವಿನೊಂದುದೆಸೆಯಿಂ ಪಸುಗಳ್ ||
ಇಳೆಯೊಳ್ ರೋಗದೆ ಸಾಗುಂ |
ತಿಳಿವುದು ರಾಕ್ಷಸ[ಮು]ವೆಂಬ ಸಂವತ್ಸರದೊಳ್ || ೪೯ ||

ಇಳೆಗೀಶರ ಬಾಧೆ ಕರಂ |
ಬೆಳಸೊಂದುಂ ಬೆಳೆಯದದಱ ಸಾವಿಂ ಕೇಡಿಂ ||
ದೞವರ್ ಪಲಂಬರಿಂತಿದು |
ನಳಸಂವತ್ಸರದ ಫಲ[1]ಮುನಱ ನೀಂ ಧರೆಯೊಳ್ || ೫೦ ||

ಕಾರ ಮೞೆಯಿಲ್ಲ ಕಡವೞೆ |
ನೇರಿದುವೆನಿಸಿರ್ದ ಅವರೆ ಗೋದುವೆ ಜೋಳಂ ||
ಸಾರಸವೆನೆ ಬೆಳಸಕ್ಕುಂ |
ಧಾರಿಣಿ ಪರಬಾಧೆ ಪಿಂಗಳಾಬ್ದದೊಳೆಲ್ಲಂ || ೫೧ ||

ಕಡೆವೆೞೆ ಮಧ್ಯಮಮೆನಿಕುಂ |
ಕಿಡುಗುಂ ಜೀವಧನಮುಮಗ್ನಿ ಬಾಧೆಗಳಿಂದಂ ||
ಪಡೆವಾತೇಂ ಬೆಳಸಲ್ಪಂ |
ಕಿಡುಗುಂ ಧರೆ ಕಾಳಯುಕ್ತಿ(ಕ್ತ) ಸಂವತ್ಸರದೊಳ್ || ೫೨ ||

ಮುಂಚಿದ ಕಾರ್ಮುಗಿಲ್ ಸುರಿದೊಡೆ |
ಸಂಚರಿಸದೆ ............ಮೆಂಬಿವುಂ ಪೆರ್ಬೆಳಸುಂ ||
ಸಂಚಳ ಸಮಸ್ತಧಾನ್ಯಂ |
ವಂಚಿಸಿ ಸಿದ್ಧಾರ್ಥಿಯೆಂಬ ಸಂವತ್ಸರದೊಳ್ || ೫೩ ||

ಪಲಬರ್ ಮನ್ನೆಯರೞಿಗುಂ |
ನೆಲ ನೊಯ್ಯನೆ ಬೆಳೆಗು ವಿಟ್ಟಿಯುಂ ಪಸ(ಫಲ)ವಕ್ಕುಂ ||
ಪಲವುಂ ಗೋಕುಲಮೞಿಗುಂ |
ಸಲೆ ಕನ್ನಡನಾಡೆ ರೌದ್ರಿ ಸಂವತ್ಸರದೊಳ್ || ೫೪ ||

ಕಱೆವುದು ಮೞೆ ಬಱವುದು ನೆಲ |
ನೆಱೆ ನೋಡಿರೆ ಗೋಧಿ ಕಡಲೆಯುಂ ಪಿರಿದಕ್ಕುಂ ||
ಕಱೆಗುಂ ದನ ದುರ್ಮತಿಯೊಳ್ |
ಬಱ ತಪ್ಪದು ಬಗೆಯೆ ಬಾಧೆ ಬೆಳ್ವೊಲದೇಶಂ || ೫೫ ||

---

1 ಮು ತಿಳಿನೀ ಧ.

ಪದ ಮಱೆ ಕಱೆವುದು ಬೆಳೆ |
ವುದು ಪದವಟ್ಟೆಱೆ ಸಕಲಧಾನ್ಯ ಕೊಡವಾಲಿಂದಂ ||
ಪೊದಟ್ವಾಪುರ ಗೋಕುಲವುಂ |
ಮುದದಿಂ ದುಂದುಭಿಯೊಳೆಯ್ದೆ ಸುಖದಿಂ ಬಾಳ್ಗುಂ || ೫೬ ||

ಮಱೆಯುಂ ಬೆಳಸುಂ ಪಿರಿದೆನೆ |
ಲಱೆವವರಾರ್ ಬಿದಲಧಾನ್ಯಮಂ ಧರೆ ಸುಖದಿಂ ||
ದುಱುವುದು ಕಾರ್ಗಾಲದೊಳಂ |
ತಿಳಿ ರುಧಿರೋದ್ಗಾರಿಯೆಂಬ ಸಂವತ್ಸರದೊಳ್ || ೫೭ ||

ಬೆಳಸಿನಿಸಿಲ್ಲಲ್ಪಫಲಂ |
ಮಱೆಯಾಗದು ವರ್ಣನಾಲ್ಕ(ಮೂಱ)ಱೊಳ್ ಭೂಪರೊಳಂ ||
ಬೆಳೆವುದು ಧರ್ಮಂ ಬಾಧೆ |
ಗಳೊಳವೀ ರಕ್ತಾಕ್ಷಿಯೆಂಬ ಸಂವತ್ಸರದೊಳ್ || ೫೮ ||

ಸುರಿವ ಮಱೆಯಿಂದೆ ತೊಱೆಗಳ್ |
ಪಿರಿದಪ್ಪುವು ಬೆಳಸು ಬೆಳೆಗು ತಪ್ಪದೆ ನಾಡೊಳ್ ||
ಧರೆಯೊಳ್ ಗಜ(ಜನ)ಘರ್ಜನೆಯಿಂ |
ನರರಂಜುಗು ಕ್ರೋಧನವುನೆಂಬ ಸಂವತ್ಸರದೊಳ್ || ೫೯ ||

ಮೊಕ್ಕಳಮಾಗದು ಕಿಱುಕಿಱು |
ದಕ್ಕಂ ಮಱೆ ಬೆಳಸುಮಾದೊಡಂ ಭಯರಸ ತಾ ||
ನಕ್ಕಂ ಕ್ಷಿತಿಪರ ಕಾಳೆಗ |
ಮಕ್ಕಂ ಕ್ಷಯಮತ್ಸರಂ ಪ್ರವರ್ತಿಸೆ ಲೋಕಂ || ೬೦ ||

ಶ್ರೀಮನ್ಮೇಘಾಡಂಬರ |
ವೀಮಹಿಗಂ ಕಱೆಗು(ಗೆ)ಮಱೆಯನೊಳ್ಪಿಹವೆನಲುಂ ||
ಕ್ಷೇಮದೆ ಧಾನ್ಯಂ ಬೆಳೆಗುಂ(ಗೆಮ) |
ಈ(ಹಿಂ)ಮನುಜರ್ ಸುಖದಿನಿರ್ಕೆಯಾಚಂದ್ರಾರ್ಕಂ || ೬೧ ||

—ಸಂವತ್ಸರ ಫಲಂಗಳ್ ಸಮಾಪ್ತಂ—

ಮಂಗಳ ಮಹಾಶ್ರೀಶ್ರೀಶ್ರೀ.

---

1 ದಱುದಿರು.

* ಇಲ್ಲಿಂದ ಮುಂದೆ "ಧರೆ ಬಣ್ಣಿಸೆ" ಎಂಬ ಗ್ರಂಥಭಾಗವು ಅರಾ ಪ್ರತಿಯಲ್ಲಿ ಆರಂಭವಾಗಿದೆ.

# ತಿದ್ದುಪಡಿ

ಮತ್ತು ಪಾಠಾಂತರ

| | | | |
|---|---|---|---|
| 1 | 4 | ವಿರಕ್ತಿಯುೞಿಪುವ | ಮೆಂದುತಿಳಿಪುವ |
| ,, | 6 | ಕ್ಷಿಸಲೆವಡಡೆ | ಕ್ಷಿಸಲೆವಡೆದ |
| 2 | 13 | ರ್ಚಿದ–ಬಾಡ | ರ್ಚಿಸಿದಂತೀವಂ ನಾಲ್ಕುಬಾಡವುಂದಯೆಯಿಂದಂ |
| 3 | 15 | ಕತಮೆುೞೆವಂ | ಕೃತಮುೞಿಯಾ |
| ,, | | ಕುಂಚ | ಕುಂಬ |
| ,, | 16 | ತನಯೆಂ ಮಾಚಂ | ತನಯ ದೋರಂ(ಕವಿ.ಪಾ) |
| ,, | 20 | ಬೆಸತೆಗೆ | ಬೆಸುಗೆಗೆ |
| 4 | 24 | ಜನಭಕ್ತರೊಳ್ಪಿನ | ಜಿನಭಕ್ತನೊಳ್ಪಿನ |
| 6 | 40 | ಮುಟೆಯುಕ್ಕಂ | ಮುೞ್ಉುಕ್ಕುಂ |
| 8 | 1(ಪಂ.4) | ಕಡಿವೊಡಂ | ಕಡಿವೊಡಂ ಕಾಂತಿಗಿಡುವೊಡಂಕೂಟಿಮೆರೆವುಪ್ಪು |
| | ,,(ಪ.13) | ದೇಗುತಿರ್ಪೊಡಂ | ಕೇಗುತಿರ್ಪೊಡಂ ಕೆಲಕೆಲ ಸಿರುಪೆ ನೆಗೆವೊಡಂ |
| 9 | 1 | ಯೆಕ್ಕಿಲು | ಯೆಂಕ್ಕೆಲ |
| ,, | 25 | ದೀಪ್ತಿಗೆಟ್ಟಿಂದು | ದೀಪ್ತಿಯಿಂದುವಿನವೊಲಿರೆತಾಂಘನಾಳಿ (ಕ.ಪಾ.) |
| 17 | 27 | ರುಚಿ[ಯತಿ] | ರುಚಿಗಳ್ (ಕವಿಚರಿತೆಪಾಠ) |
| 18 | 2 | ಬಿಳಿದಾದೊಡ | ಬಿಳಿದಾದೊಡಿರುಳಾದಾಗಳ್( ಕವಿ.ಪಾಠ) |
| 23 | 7 | ಬಳಿಗುಂ | ಬೆಳಿಗುಂ |
| 39 | 49 | ಶೌರಿ | ಸೌರಿ |
| | 52 | ,, | ,, |
| 49 | 117 | (ಗ್ರಹವಕ್ರಂ) | (ಗ್ರಹವೇಧಂ) |
| 53 | 146 | ತನೂಜಗೆ | ತನೂಜೆಗೆ |
| 87 | 4 | [ನಲ್ಲ]ದಿರಂ | [ನಲ್ಗ]ದಿರುಂ |
| 97 | 9 | ಸಿರದೆ | ಸೆರಡು |
| | 10 | ಪಡಿವ | ಪಡುವ |
| 98 | 14 | ಮಿಪ್ಪುರು | ಮುಪ್ಪುರು |
| 102 | 46 | (ನೆಡ್ಡಿ) | ನಾಲ್ಕು |
| 103 | 50 | ಮಳಲ | ಮುಟಲ |
| 105 | | 50 | 49(ಇಲ್ಲಿಂದ ಮುಂದೆ 69ರವರೆಗೂ ಒಂದೊಂದು ಪದ್ಯಸಂಖೆ ಕಡಿಮೆಯಾಗಿಓದಿಕೊಳ್ಳುವುದು). |
| 104 | 62 (1) | ಪಾವೆಡೆ | ಪೋ. ಡೆಗೋ(ಕ. ಪಾ) |
| | | ಕಟ್ಟುಗೆ | ಕಟ್ಟೆಸು ಕರ್ಚಿ (ಕ. ಪಾ.) |
| | | ನೀಳ್ದಗುಟಿ | ನೀಳ್ದಗಲೆ (ಕ. ಪಾ.) |
| | | ಭಾರಕಂ | ಬಾೞಕಂ (ಕ. ಪಾ.) |
| | | ಮುಸ್ತೆಯಿಪ್ಪೆ | ಮುಸ್ತೆಯುಂ ಕೇ. (ಕ. ಪಾ.) |
| | | ಕಲಸ...ಲೊಳ್ | ಕೆಲಸ....ಬಾೞದೊೞಿಕೊಳ್ (ಕ. ಪಾ.) |
| | | ಮೆಂಗೆ | ಮಾಗೆ (ಕ. ಪಾ.) |